KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಮೇ ೮, ೨೦೦೮ (ವೈಶಾಖ ೧೮, ಶಕ ವರ್ಷ ೧೯೩೦) | ಸಂಚಿಕೆ ೧೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಸ್. ದಿವಾಕರ್, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರ ಮೇಲಿನ ಸಾಬೀತಾಗಿರುವ ಆರೋಪಕ್ಕೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ: ಸಿಆಸುಇ 50 ಎಸ್‌ಇಎನ್ 98, ದಿನಾಂಕ 14.7.2006.
2. ಶ್ರೀ ಎಸ್. ದಿವಾಕರ್ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 12–8–2006
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 114 ಎಸ್‌ಇಎನ್ 04, ದಿನಾಂಕ 2–11–2006
4. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ 22–2–2007
5. ಆಪಾದಿತರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂ: ಸಿಆಸುಇ 50 ಎಸ್‌ಇಎನ್ 98, ದಿನಾಂಕ 17–3–2007
6. ಆಪಾದಿತರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 26–3–2007
7. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 102 ಸಿಎನ್‌ಎಸ್ 07/ಪಿಎಸ್‌ಸಿ, ದಿನಾಂಕ 22–11–2007.

**ಪ್ರಸ್ತಾವನೆ:**

ಶ್ರೀ ಎಸ್. ದಿವಾಕರ್, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರು ದಿನಾಂಕ 15–3–1976 ರಿಂದ 28–2–1986ರ ಅವಧಿಯಲ್ಲಿ ನವದೆಹಲಿಯ ಕರ್ನಾಟಕ ಭವನದಲ್ಲಿ ಹೌಸ್ ಕೀಪರ್ ಹಾಗೂ ಕ್ಯಾಶಿಯರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡದೇ ಸರ್ಕಾರದ ರೂ.68,285.45 ಹಣವನ್ನು ದುರುಪಯೋಗಪಡಿಸಿಕೊಂಡಿರುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(i) (ii) (iii)ನ್ನು ಉಲ್ಲಂಘಿಸಿರುವ ಆರೋಪಗಳಿಗಾಗಿ, ಮೇಲೆ (1)ರಲ್ಲಿ ಓದಲಾದ ದಿನಾಂಕ 14–7–2006ರಂದು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು, 1957ರ ನಿಯಮ 11 ಮತ್ತು 11ಎ ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ, ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಅಪಾದಿತರಾದ ಶ್ರೀ ಎಸ್. ದಿವಾಕರ್ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ 12–8–2006ರಂದು ನೋಟೀಸಿಗೆ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಿರುತ್ತಾರೆ. ಇವರ ಪ್ರತಿರಕ್ಷಣಾ ಹೇಳಿಕೆಯಲ್ಲಿ ಸಮರ್ಪಕ ಕಾರಣಗಳು ಇಲ್ಲದೇ ಇರುವುದರಿಂದ ಅವರ ಹೇಳಿಕೆಯನ್ನು ಸರ್ಕಾರವು ತಳ್ಳಿ ಹಾಕಿ ವಿಚಾರಣೆ ನಡೆಸಲು ಮೇಲೆ (3)ರಲ್ಲಿ ಓದಲಾದ ದಿನಾಂಕ 2–11–2006ರ ಸರ್ಕಾರದ ಆದೇಶದಲ್ಲಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ವಿ.ಪಿ. ಕೆದಿಲಾಯ ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ರಾಜಕೀಯ ಶಿಷ್ಟಾಚಾರ–1) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರವಾದ ಸರ್ಕಾರಕ್ಕೆ ಮೇಲೆ (4)ರಲ್ಲಿ ಓದಲಾದ ದಿನಾಂಕ 22–2–2007ರಂದು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿನ ನಿರ್ಣಯದಂತೆ ಆಪಾದಿತರ ಮೇಲಿನ ಆರೋಪವು ಭಾಗಶಃ ಸಾಬೀತಾಗಿದ್ದರಿಂದ, ಮೇಲೆ (5)ರಲ್ಲಿ ಓದಲಾದ ದಿನಾಂಕ 17–3–2007ರಂದು ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಲಾಗಿತ್ತು. ಆಪಾದಿತರು ವಿಚಾರಣಾ ವರದಿಯಲ್ಲಿನ ನಿರ್ಣಯದ ವಿರುದ್ಧ ರಕ್ಷಣಾ ಹೇಳಿಕೆಯನ್ನು ಮೇಲೆ (6)ರಲ್ಲಿ ಓದಲಾದ ದಿನಾಂಕ 26–3–2007ರಂದು ಸಲ್ಲಿಸಿ, ವಿಚಾರಣಾಧಿಕಾರಿಗಳು ಸಿ.ಸಿ.ಎ. ನಿಯಮಗಳಡಿಯಲ್ಲಿ ಸರಿಯಾಗಿ ವಿಚಾರಣೆ ನಡೆಸಿಲ್ಲವೆಂದು, ಕೆಳ ಹಂತದ ಸಿಬ್ಬಂದಿಯು ನೇರವಾಗಿ ನಗದನ್ನು ನಗದು ವಹಿಯನ್ನು ನಿರ್ವಹಿಸುತ್ತಿದ್ದರೆಂದು ಮತ್ತು ಕೇಂದ್ರ ನಗದು ಪುಸ್ತಕದ ಮೂಲ ಪ್ರತಿ ವಿಚಾರಣೆಯಲ್ಲಿ ಹಾಜರುಪಡಿಸಿಲ್ಲವೆಂದು ಹಾಗೂ ಈ ಘಟನೆಯು 25 ವರ್ಷಗಳ ಹಿಂದೆ ನಡೆದಿದ್ದು, ಅವರನ್ನು ದೋಷಿಯನ್ನಾಗಿ ನಿರೂಪಿಸುವುದು ಸಮಂಜಸವಲ್ಲವೆಂದು ತಿಳಿಸಿ, ತಮ್ಮನ್ನು ದೋಷ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ವಿಚಾರಣಾ ವರದಿಯಲ್ಲಿನ ನಿರ್ಣಯ, ಆಪಾದಿತರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ್ದ ರಕ್ಷಣಾ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಿದಾಗ, ನಿವೃತ್ತ ಆಪಾದಿತರಾದ ಶ್ರೀ ಎಸ್. ದಿವಾಕರ್ ಇವರ ಮೇಲಿನ ಆಪಾದನೆಯು ಕೇವಲ ಭಾಗಶಃ ರುಜುವಾತಾಗಿದೆ. ಅಂದರೆ ಇವರ ಮೇಲ್ವಿಚಾರಣಾ ಕೊರತೆಯಿಂದ ಕೆಳಹಂತದ ನೌಕರರು ಹಣ ದುರುಪಯೋಗಪಡಿಸಿಕೊಳ್ಳಲು ಸಾಧ್ಯವಾಗಿರುವುದು ಕಂಡು ಬರುತ್ತದೆ. ಹಣ ದುರುಪಯೋಗವಾಗಲು ಕೆಳಹಂತದ ಅಧಿಕಾರಿಗಳನ್ನು ಜವಾಬ್ದಾರರನ್ನಾಗಿ ಮಾಡಬೇಕಾಗಿರುವುದರಿಂದ ಕರ್ನಾಟಕ ಭವನವು ಕ್ರಮ ತೆಗೆದುಕೊಂಡಿರುವುದರ ಹಿನ್ನೆಲೆಯಲ್ಲಿ ಲಘು ದಂಡನೆ ವಿಧಿಸುವ ಬಗ್ಗೆ ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಿಂದ ರೂ. 500/– ಗಳನ್ನು ಎರಡು ತಿಂಗಳುಗಳ ಕಾಲ ಕಡಿತಗೊಳಿಸುವ ದಂಡನೆ ವಿಧಿಸುವ ಬಗ್ಗೆ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಎಸ್‌ಇಎನ್ 1998, ಬೆಂಗಳೂರು ದಿನಾಂಕ: 11ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಎಸ್. ದಿವಾಕರ್, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರ ನಿವೃತ್ತಿ ವೇತನದಿಂದ ರೂ. 500/–ಗಳನ್ನು ಎರಡು ತಿಂಗಳುಗಳ ಕಾಲ ಕಡಿತಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ,**

ಪಿ.ಆರ್. 2211 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–3).

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ಮಾಹಿತಿ ಹಕ್ಕು ಶಾಖೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಜನಸ್ಪಂದನ) ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2004, ದಿನಾಂಕ 6–9–2004.
2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎ 05 ಎಆರ್‌ಬಿ 2005, ದಿನಾಂಕ 2–9–2005
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 363 ಸಿಶಾಸೇ 2007, ದಿನಾಂಕ 17–10–2006
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಅಬೆಸೇ 2007, ದಿನಾಂಕ 5–9–2007
5. ಮುಖ್ಯ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ: ಇಲ್ಲ ದಿನಾಂಕ 28–11–2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನಸ್ಪಂದನ ಕೋಶದಲ್ಲಿ ಕೆಳಕಂಡ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿದ್ದು, ಸದರಿ ಹುದ್ದೆಗಳನ್ನು ಮರುವಿನ್ಯಾಸದ (ರೀ–ಡಿಪ್ಲಾಯ್‌ಮೆಂಟ್) ಮೂಲಕ ಭರ್ತಿ ಮಾಡಲು ತಿಳಿಸಲಾಗಿದೆ.

1) ಅಧೀನ ಕಾರ್ಯದರ್ಶಿ – ಒಂದು ಹುದ್ದೆ
2) ಶಾಖಾಧಿಕಾರಿ – ಒಂದು ಹುದ್ದೆ
3) ವಿಷಯ ನಿರ್ವಾಹಕರು – ಎರಡು ಹುದ್ದೆಗಳು (ಗ್ರೂಪ್–ಸಿ)

ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮದ ಮತ್ತು ತತ್ಸಂಬಂಧಿತ ವಿಷಯಗಳ ಮತ್ತು ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2005 (2005ರ ಕೇಂದ್ರದ ಅಧಿನಿಯಮ ಸಂಖ್ಯೆ 22) ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ, ಸಿಆಸುಇ ಜನಸ್ಪಂದನ ಕೋಶದಿಂದ ಸಿಆಸುಇ (ಆಡಳಿತ ಸುಧಾರಣೆ) ವಿಭಾಗಕ್ಕೆ ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಮಾಹಿತಿ ಹಕ್ಕು ಶಾಖೆಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ಮರುವಿನ್ಯಾಸದ (ರೀ–ಡಿಪ್ಲಾಯ್‌ಮೆಂಟ್) ಮೂಲಕ ಭರ್ತಿ ಮಾಡುವ ನಿಬಂಧನೆಗೊಳಪಟ್ಟು ಸೃಜಿಸಲು ಮಂಜೂರಾತಿ ನೀಡಲಾಗಿದೆ.

1) ಶೀಘ್ರಲಿಪಿಗಾರ – ಒಂದು ಹುದ್ದೆ
2) ಕಿರಿಯ ಸಹಾಯಕ – ಒಂದು ಹುದ್ದೆ
3) ಬೆರಳಚ್ಚುಗಾರ – ಒಂದು ಹುದ್ದೆ
4) ಗ್ರೂಪ್–ಡಿ – ಒಂದು ಹುದ್ದೆ

ಮೇಲೆ ಓದಲಾದ (5)ರಲ್ಲಿನ ಸರ್ಕಾರದ ಮುಖ್ಯ ಕಾರ್ಯದರ್ಶಿಗಳವರ ಟಿಪ್ಪಣಿಯಲ್ಲಿ, ಮಾಹಿತಿ ಹಕ್ಕು ಪಡೆಯಲು ಹಕ್ಕು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ 22)ರ ಅನುಷ್ಠಾನದ ಜವಾಬ್ದಾರಿಯನ್ನು ಹಾಗೂ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನ)ಕ್ಕೆ ವರ್ಗಾಯಿಸಲು ಆದೇಶಿಸಿದ್ದಾರೆ. ಅದರಂತೆ ಈ ಆದೇಶ ಹೊರಡಿಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 55 ಆರ್‌ಟಿಐ 2007, ಬೆಂಗಳೂರು ದಿನಾಂಕ: 22ನೇ ಡಿಸೆಂಬರ್, 2007**

ಪ್ರಸ್ತುತ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಆಡಳಿತ ಸುಧಾರಣೆ)ಯ ಕಾರ್ಯ ವ್ಯಾಪ್ತಿಯಲ್ಲಿನ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (2005ರ ಕೇಂದ್ರದ ಕಾಯ್ದೆ ಸಂಖ್ಯೆ 22) ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ, (ಆಡಳಿತ ಸುಧಾರಣೆ) ಇಲಾಖೆಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನಸ್ಪಂದನ ಕೋಶಕ್ಕೆ ವರ್ಗಾವಣೆ ಮಾಡಲಾಗಿದೆ.

ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸುಇ ಜನಸ್ಪಂದನ ಕೋಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2004, ದಿನಾಂಕ 6–9–2004ರನ್ವಯ ಸೃಜಿಸಲಾಗಿರುವ ಹುದ್ದೆಗಳಲ್ಲಿ, ಅಧೀನ ಕಾರ್ಯದರ್ಶಿ–ಒಂದು ಹುದ್ದೆ, ಶಾಖಾಧಿಕಾರಿ–ಒಂದು ಹುದ್ದೆ, ವಿಷಯ ನಿರ್ವಾಹಕರು–ಎರಡು ಹುದ್ದೆಗಳು (ಗ್ರೂಪ್–ಸಿ) ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 11 ಅಬೆಸೇ 2007, ದಿನಾಂಕ 5–9–2007ರಲ್ಲಿ ಸೃಜಿಸಲಾಗಿರುವ ಶೀಘ್ರಲಿಪಿಗಾರ–ಒಂದು ಹುದ್ದೆ, ಕಿರಿಯ ಸಹಾಯಕ–ಒಂದು ಹುದ್ದೆ, ಬೆರಳಚ್ಚುಗಾರ–ಒಂದು ಹುದ್ದೆ ಮತ್ತು ಗ್ರೂಪ್–ಡಿ ಒಂದು ಹುದ್ದೆ, ಇವುಗಳನ್ನು ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಅಧಿಸೂಚನೆ ಸಂಖ್ಯೆ: ಸಿಆಸುಇ 392 ಸಿಶಾಸೇ 2006, ದಿನಾಂಕ 16–11–2006ರನ್ವಯ ಶಾಖಾಧಿಕಾರಿಯಾಗಿ ನೇಮಕಗೊಂಡಿರುವ ಶ್ರೀ ಬಿ. ಶಿವರುದ್ರಸ್ವಾಮಿ ಹಾಗೂ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 48 ಅಸಸೇ 2007, ದಿನಾಂಕ 24–8–2007ರನ್ವಯ ಸಹಾಯಕಿಯಾಗಿ ನೇಮಕಗೊಂಡಿರುವ ಶ್ರೀಮತಿ ಜಾಹೀದಾ ಎನ್. ಗಚ್ಚಿನಮಹಲ ಇವರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಯಿಂದ ಸಿಆಸುಇ (ಜನಸ್ಪಂದನ ಕೋಶಕ್ಕೆ) ಈ ಕೂಡಲೇ ಜಾರಿಗೆ ಬರುವಂತೆ ವರ್ಗಾಯಿಸಿ ಆದೇಶಿಸಿದೆ. ಉಳಿದ ಅಧೀನ ಕಾರ್ಯದರ್ಶಿ ಹುದ್ದೆ, ಸಹಾಯಕ ಹುದ್ದೆ, ಬೆರಳಚ್ಚುಗಾರ ಹುದ್ದೆ, ಗ್ರೂಪ್–ಡಿ ಹುದ್ದೆಗಳು ಖಾಲಿಯಿದ್ದು, ಸದರಿ ಹುದ್ದೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಮತ್ತು ಸೇವೆಗಳು–3)ಯೊಂದಿಗೆ ವ್ಯವಹರಿಸಿ ಭರ್ತಿ ಮಾಡಿಕೊಳ್ಳಲು ಕೋರಲಾಗಿದೆ.

ಈ ಆದೇಶವನ್ನು ಸಿಆಸುಇ (ಸೇವಾ ನಿಯಮಗಳು) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 342 ಸೇನಿಸಿ 2007, ದಿನಾಂಕ 3–11–2007ರ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಿ. **ಚಂದ್ರಯ್ಯ,**
ಸರ್ಕಾರದ ಉಪ ಕಾರ್ಯದರ್ಶಿ (ಪ್ರ),
ಸಿಆಸುಇ (ಆಡಳಿತ ಸುಧಾರಣೆ).

ಪಿ.ಆರ್. 2216

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವಿಶ್ವನಾಥ ಸಿಂಗ್, ಎಸಿಪಿ, ವಿಧಾನಸೌಧ ಭದ್ರತೆ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ37/2007, ದಿನಾಂಕ 6–11–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 393 ಪೊಸಿಪ 2007, ಬೆಂಗಳೂರು, ದಿನಾಂಕ 19ನೇ ಡಿಸೆಂಬರ್, 2007**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ವಿಶ್ವನಾಥ ಸಿಂಗ್, ಎಸಿಪಿ, ವಿಧಾನಸೌಧ ಭದ್ರತೆ, ಬೆಂಗಳೂರು ಇವರ ವಿರುದ್ಧ ಮಾಡಲಾದ ಕರ್ತವ್ಯಲೋಪ, ದುರ್ನಡತೆ, ಅಧಿಕಾರದ ದುರುಪಯೋಗ ಈ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಮೇಲೆ (1)ರಲ್ಲಿ ಓದಲಾದ ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ / ಸಾಕ್ಷ್ಯಾಧಾರಗಳನ್ನು ನಾಶಪಡಿಸುವ

ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತು ಗೊಳಿಸುವುದು ಅವಶ್ಯಕವೆಂದು ಸರ್ಕಾರವು ಭಾವಿಸಿರುವುದರಿಂದ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿಶ್ವನಾಥ ಸಿಂಗ್‌ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿಶ್ವನಾಥ ಸಿಂಗ್, ಎಸಿಪಿರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿಶ್ವನಾಥ ಸಿಂಗ್, ಎಸಿಪಿರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2219 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿ, ವಿಧಾನಸೌಧ ಉಪ ವಿಭಾಗ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ41/2007, ದಿನಾಂಕ 6–11–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 394 ಪೊಸಿಪ 2007, ಬೆಂಗಳೂರು, ದಿನಾಂಕ 19ನೇ ಡಿಸೆಂಬರ್, 2007**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿ, ವಿಧಾನಸೌಧ ಉಪ ವಿಭಾಗ, ಬೆಂಗಳೂರು ಇವರ ವಿರುದ್ಧ ಮಾಡಲಾದ ಕರ್ತವ್ಯಲೋಪ, ದುರ್ನಡತೆ, ಅಧಿಕಾರದ ದುರುಪಯೋಗ ಈ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಮೇಲೆ (1)ರಲ್ಲಿ ಓದಲಾದ ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ / ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತು ಗೊಳಿಸುವುದು ಅವಶ್ಯಕವೆಂದು ಸರ್ಕಾರವು ಭಾವಿಸಿರುವುದರಿಂದ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜೆ.ಟಿ. ಅಜ್ಜಪ್ಪರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2220 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು–ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ: 1.** ದಿನಾಂಕ 7–10–06ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 105 ಎಸ್‌ಇಎನ್ 05

**2.** ವಿಚಾರಣಾಧಿಕಾರಿಯವರ ವರದಿ ದಿನಾಂಕ 27–9–07

**3.** ವಿಚಾರಣಾಧಿಕಾರಿಯವರ ಮನವಿ ದಿನಾಂಕ 1–10–07

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ನಾಗರಾಜ್, ಕೆಎಎಸ್ ಕಿರಿಯ ಶ್ರೇಣಿ ಅಧಿಕಾರಿ, ಅಂದಿನ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಶ್ರೀ ಕೆ.ಎಂ. ಶಂಕರಯ್ಯ, ಉಪ

ತಹಶೀಲ್ದಾರ್, ಶ್ರೀ ಬಿ.ಎಂ. ಶಿವಲಿಂಗಸ್ವಾಮಿ, ಪ್ರಥಮ ದರ್ಜೆ ಸಹಾಯಕ ಮತ್ತು ಶ್ರೀ ಎಸ್. ದೇವಯ್ಯ, ನಿವೃತ್ತ ಕಛೇರಿ ಸಹಾಯಕ, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಇವರುಗಳ ವಿರುದ್ಧ ಚಾಮರಾಜನಗರ ಜಿಲ್ಲೆಯ ಕಂದಾಯ ಘಟಕದಲ್ಲಿ ಯಾವುದೇ ನೇಮಕಾತಿ ಮಾಡದಿದ್ದರೂ ಹಾಗೂ ಬ್ಯಾಕ್‌ಲಾಗ್ ಹುದ್ದೆಗಳು ಸೃಷ್ಟಿಯಾಗಿಲ್ಲದಿದ್ದರೂ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳಿಗೆ ಮೀಸಲಿರಿಸಿದ ಭರ್ತಿ ಮಾಡದ ಖಾಲಿ ಹುದ್ದೆಗಳ ವಿಶೇಷ ನೇಮಕಾತಿ ನಿಯಮ 2001ರನ್ವಯ ಹುದ್ದೆಗಳನ್ನು ಭರ್ತಿ ಮಾಡಲು ಅಧಿಸೂಚನೆ ಹೊರಡಿಸುವ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಿ ಅಕ್ರಮವಾಗಿ ಅಧಿಸೂಚನೆ ಹೊರಡಿಸಿ ಅನರ್ಹ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳಲು ಕಾರಣರಾಗಿರುವ ಆರೋಪದ ಸತ್ಯಾಸತ್ಯತೆಗಳನ್ನು ತಿಳಿಯುವ ಸಲುವಾಗಿ ಜಂಟಿ ಇಲಾಖಾ ವಿಚಾರಣೆ ಮುಂದುವರಿಸಿ, ಶ್ರೀ ಟಿ.ಎಸ್. ಪಾಲನೇತ್ರ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 27–10–2007ರಂದು ಜಂಟಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಸಂಬಂಧ ಇವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಬೇಕಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 052 ಕೆಇವಿ 2007, ಬೆಂಗಳೂರು ದಿನಾಂಕ: 19ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 016 ಸೇಇವಿ 2005, ದಿನಾಂಕ 23–8–2005ರನ್ವಯ ರೂ. 6000–00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 045 ಸೇಇವಿ 01, ದಿನಾಂಕ 4–3–02ರನ್ವಯ ರೂ. 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052–ಸಚಿವಾಲಯ–ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051–ಸಾಮಾನ್ಯ ವೆಚ್ಚಗಳು"ರಲ್ಲಿ ಭರಿಸತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 2218

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಸರ್ಕಾರದ ಆದೇಶ ಸಂ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006, ಬೆಂಗಳೂರು, ದಿನಾಂಕ 30–12–2006 ಅನ್ನು ಮಾರ್ಪಾಡು ಮಾಡುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006, ಬೆಂಗಳೂರು, ದಿನಾಂಕ 30–12–2006.

**2.** ಅಧಿಸೂಚನೆ ಸಂಖ್ಯೆ: ಡಿಸಿಎ 7 ಎಆರ್‌ಬಿ 2007.

**ಪ್ರಸ್ತಾವನೆ:**

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಅಭಿಯಂತರರು ವಿಭಾಗೀಯ ಕಛೇರಿಯಲ್ಲಿ ಕಾರ್ಯಪಾಲಕ ಅಭಿಯಂತರರಿಗೆ ಹೆಚ್ಚಿನ ಹಣಕಾಸು ನಿರ್ವಹಣಾ ಅಧಿಕಾರವಿರುವುದರಿಂದ ಆದೇಶ ಸಂಖ್ಯೆ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/1/2006, ಬೆಂಗಳೂರು, ದಿನಾಂಕ 30–12–2006ರ ಆದೇಶದಲ್ಲಿ ಮಂಜೂರಾಗಿರುವ ಒಬ್ಬ ಪ್ರಥಮ ದರ್ಜೆ ಲೆಕ್ಕ ಸಹಾಯಕರ ಜೊತೆಯಲ್ಲಿ ಹೆಚ್ಚಿನ ಕಾರ್ಯನಿರ್ವಹಿಸಲು ಮತ್ತೊಬ್ಬ ಪ್ರಥಮ ದರ್ಜೆ ಲೆಕ್ಕ ಸಹಾಯಕರ ಅವಶ್ಯಕತೆ ತುಂಬಾ ಇದೆ ಹಾಗೂ ಅದೇ ರೀತಿ ಇಂಜಿನಿಯರಿಂಗ್ ಶಾಖೆಯಲ್ಲಿಯೂ ಕಛೇರಿ ಅಧೀಕ್ಷಕ ಹುದ್ದೆಯು ಅವಶ್ಯಕವೆಂದು ಅಧೀಕ್ಷಕ ಅಭಿಯಂತರರು, ಕೆಎಚ್‌ಎಸ್‌ಡಿಆರ್‌ಪಿ, ಬೆಂಗಳೂರು ಇವರು ತಿಳಿಸಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/1/2006, ಬೆಂಗಳೂರು, ದಿನಾಂಕ 30–12–2006ರ ಅನುಬಂಧ–ಎನಲ್ಲಿ ಕ್ರಮ ಸಂಖ್ಯೆ: 10 ಕಛೇರಿ ಅಧೀಕ್ಷಕರ ಹುದ್ದೆಯು ನಾಲ್ಕು ಇದ್ದು ಅದನ್ನು ಮೂರು ಹುದ್ದೆಗಳೆಂದು ಪರಿವರ್ತಿಸಿ ಉಳಿದ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ಅಭಿಯಂತರರ ಶಾಖೆ, ಕೆಎಚ್‌ಎಸ್‌ಡಿಆರ್‌ಪಿ ಯೋಜನಾ ಕಛೇರಿ, ಬೆಂಗಳೂರು ಇಲ್ಲಿ ಸ್ಥಳಾಂತರಿಸಬೇಕೆಂದು ಹಾಗೂ ಅನುಬಂಧ 'ಎ' ನಲ್ಲಿ ಕ್ರಮ ಸಂಖ್ಯೆ 13ರಲ್ಲಿ ಪ್ರಥಮ ದರ್ಜೆ ಸಹಾಯಕರ 18 ಹುದ್ದೆಗಳಿದ್ದು ಅವುಗಳಲ್ಲಿ 3 ಪ್ರಥಮ ದರ್ಜೆ ಸಹಾಯಕರ ಹುದ್ದೆಯನ್ನು ಪ್ರಥಮ ದರ್ಜೆ ಲೆಕ್ಕ ಸಹಾಯಕರೆಂದು ಪರಿವರ್ತಿಸಿ ಬೆಂಗಳೂರು, ಧಾರವಾಡ, ಗುಲ್ಬರ್ಗಾ ವಿಭಾಗೀಯ ಕಛೇರಿಗೆ ತಲಾ 1 ಹುದ್ದೆಯಂತೆ ಸ್ಥಳಾಂತರಿಸಬೇಕೆಂದು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಇದನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ತಿದ್ದುಪಡಿ ಆದೇಶ ಸಂಖ್ಯೆ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006, ಬೆಂಗಳೂರು ದಿನಾಂಕ: 21ನೇ ನವೆಂಬರ್, 2007**

ಪೀಠಿಕೆಯಲ್ಲಿ ವಿವರಿಸಿರುವಂತೆ, ಸರ್ಕಾರದ ಆದೇಶ ಸಂಖ್ಯೆ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/1/ 2006, ಬೆಂಗಳೂರು, ದಿನಾಂಕ 30–12–2006ರ ಅನುಬಂಧ 'ಎ' ಅನ್ನು ಪೂರ್ವಾನ್ವಯವಾಗುವಂತೆ ಮಾರ್ಪಾಡು ಮಾಡಲಾಗಿ ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು. ಅಂದರೆ:

**ಅನುಬಂಧ – ಎ**

| ಕ್ರ. ಸಂ. | ಆದೇಶದ ಕ್ರಮ ಸಂಖ್ಯೆ | ಆದೇಶದ ಪುಟ ಸಂಖ್ಯೆ | ಕೆಎಚ್‌ಎಸ್ ಡಿಆರ್‌ಪಿ ಕಛೇರಿ ಹುದ್ದೆಯ ಹೆಸರು | ವೇತನ ಶ್ರೇಣಿ | ಸರ್ಕಾರಿ ಹುದ್ದೆ | ಸಂಸ್ಥೆಯಿಂದ | ಒಟ್ಟು ಹುದ್ದೆಗಳು |
|---|---|---|---|---|---|---|---|
| **ಕೆಎಚ್‌ಎಸ್‌ಡಿಆರ್‌ಪಿ ಕಛೇರಿ** | | | | | | | |
| 1 | 10 | 6 | ಕಛೇರಿ ಅಧೀಕ್ಷಕರು | 5200–9580 | 3 | – | 3 |
| 2 | 13 | 6 | ಪ್ರಥಮ ದರ್ಜೆ ಸಹಾಯಕ | 3850–7050 | 15 | – | 15 |
| **ಕೆಎಚ್‌ಎಸ್‌ಡಿಆರ್‌ಪಿ ಇಂಜಿನಿಯರಿಂಗ್ ಶಾಖೆ** | | | | | | | |
| 3 | 8 | 7 | ಕಛೇರಿ ಅಧೀಕ್ಷಕರು | 5200–9580 | 1 | – | 1 |
| **ಕೆಎಚ್‌ಎಸ್‌ಡಿಆರ್‌ಪಿ ಇಂಜಿನಿಯರಿಂಗ್ ವಿಭಾಗಗಳು, ಬೆಂಗಳೂರು, ಧಾರವಾಡ, ಗುಲ್ಬರ್ಗಾ** | | | | | | | |
| 4 | 7 | 7 | ಪ್ರಥಮ ದರ್ಜೆ ಲೆಕ್ಕ ಸಹಾಯಕ | 3850–7050 | 2 | – | 2 |

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಷಮಾ ಗೋಡಬೋಲೆ**
ಸರ್ಕಾರದ ಉಪ ಕಾರ್ಯದರ್ಶಿ,
ಕೆಹೆಚ್‌ಎಸ್‌ಡಿಆರ್‌ಪಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 2214

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಆರ್. ನರಸಿಂಹಲು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುಮ್ನಾಬಾದ್ ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ– ಆದೇಶ.

**ಓದಲಾಗಿದೆ: 1.** ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 56 ಪಿಪಿಇ 99, ದಿನಾಂಕ 12–1–2000

**2.** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಡಿಪಿಎನ್/ಕೇಂಸ/ವಿವ/33/2007–08, ದಿನಾಂಕ 27–11–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 343 ಪಿಪಿಇ 2007, ಬೆಂಗಳೂರು, ದಿನಾಂಕ 17ನೇ ಡಿಸೆಂಬರ್, 2007**

ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆಯ ಕ್ರ.ಸಂ. 55ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಎಸ್.ಆರ್. ನರಸಿಂಹಲು ಇವರ ಜನ್ಮ ದಿನಾಂಕವು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯಲ್ಲಿ 21–6–67 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974ರ ಕಲಂ 3ರ ಉಪ ಕಲಂ–2ರ ಅನ್ವಯ ಶ್ರೀ ಎಸ್.ಆರ್. ನರಸಿಂಹಲು ಇವರ ಜನ್ಮ ದಿನಾಂಕ 21–6–67 (ಇಪ್ಪತ್ತೊಂದನೇ ಜೂನ್ ಸಾವಿರದೊಂಬೈನೂರು ಅರವತ್ತೇಳು) ಎಂದು ಸರ್ಕಾರವು ಒಪ್ಪಿರುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು ಮತ್ತು ಕಾಫಿಪೋಸಾ ಮತ್ತು ಅಭಿಯೋಗ)

ಪಿ.ಆರ್. 2221

**ವಿಷಯ:** ಶ್ರೀ ಮುರಿಗೇಶ ಅಂಕದ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣೆಬೆನ್ನೂರು ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ – ಆದೇಶ.

**ಓದಲಾಗಿದೆ: 1.** ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 845 ಪಿಪಿಇ 2005, ದಿನಾಂಕ 3–1–2007

**2.** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಡಿಪಿಎನ್/ಕೇಂಸ/ವಿವ/43/2007–08, ದಿನಾಂಕ 6–12–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 579 ಪಿಪಿಇ 2007, ಬೆಂಗಳೂರು, ದಿನಾಂಕ 26ನೇ ಡಿಸೆಂಬರ್, 2007**

ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆಯ ಪ್ರಕಾರ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಮುರಿಗೇಶ ಅಂಕದ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣೆಬೆನ್ನೂರು ಇವರ ಜನ್ಮ ದಿನಾಂಕವು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್‌ಎಸ್‌ಎಲ್‌ಸಿ ಮೂಲ ಅಂಕಪಟ್ಟಿಯಲ್ಲಿ 05–5–71 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974ರ ಕಲಂ 3ರ ಉಪಕಲಂ 2ರ ಅನ್ವಯ ಶ್ರೀ ಮುರಿಗೇಶ ಅಂಕದ ಇವರ ಜನ್ಮ ದಿನಾಂಕ 5–5–1971 (ಐದನೇ ಮೇ ಸಾವಿರದೊಂಬೈನೂರು ಎಪ್ಪತ್ತೊಂದು) ಎಂದು ಸರ್ಕಾರವು ಒಪ್ಪಿರುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಲೀಲಾವತಿ**

ಪಿ.ಆರ್. 2222

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ ಮತ್ತು ಸು ಮತ್ತು ಕಾಫಿಪೋಸಾ ಮತ್ತು ಅಭಿಯೋಗ)

**Forest, Ecology and Environment Secretariat**

**Sub:** Diversion of 2.023 ha. of forest land in Sy.No. 79 A1 of Bogribail Village in Ankola Taluk for dumping of garbage in favour of Chief Officer, Town Panchayat, Ankola.

**Read:** 1) Letter No. A5(2) GFL.CR.15/01-02, dated 1-12-2001 of the Principal Chief Conservator of Forests, Bangalore.

2) State Government letter No. FEE 248 FGL 2001, dated 4-1-2002.

3) Government of India Ministry of Environment and Forests, Regional Office, South Zone, Bangalore letter No. F©/A/11.2/231/KAR/MISC/733, dated 29-6-2004.

4) Letter No. A5(2) GFL.CR.15/01-02, dated 17-8-2006 of the Principal Chief Conservator of Forests, Bangalore.

5) State Government letter No. FEE 170 FGL 2004, dated 13-10-2006.

6) Government of India Ministry of Environment and Forests, Regional Office, South Zone, Bangalore letter No. F©/A/11.2/231/ KAR/MISC/1645, dated 27-11-2006.

**Preamble:**

The Principal Chief Conservator of Forests had sent proposal vide his letter dated 1-12-2001 read at (1) above for diversion of 2.023 ha. of forest land in F.Sy.No. 79 A1 of Bogribail Village in Ankola Taluk, Karwar Division, Uttara Kannada District for dumping of garbage in favour of the Chief Officer, Town Panchayat, Ankola to be implemented by Karnataka Urban Infrastructure Development and Finance Corporation subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide Government letter dated 4-1-2002 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated 29-6-2004 read at (3) above has agreed in-principle subject to the fulfillment of certain conditions.

In compliance of the conditions stipulated by Government of India vide its letter dated 29-6-2004, the Principal Chief Conservator of Forests vide his letter dated 17-8-2006 read at (4) above has sent his compliance report. This compliance report was forwarded to Government of India vide State Government letter dated 13-10-2006 read at (5) above.

Finally Government of India vide its letter dated 27-11-2006 read at (6) above has conveyed its final approval under Section 2 of The Forest (Conservation) Act, 1980 for diversion of 2.023 ha. of forest land in F.Sy.No. 79 A1 of Bogribail Village in Ankola Taluk, Karwar Division, Uttara Kannada District for dumping of garbage in favour of the Chief Officer, Town Panchayat, Ankola to be implemented by Karnataka Urban Infrastructure Development and Finance Corporation subject to certain conditions. Hence the order.

**Government Order No. FEE 170 FGL 2004, Bangalore, Dated 4th June, 2007**

After examining all aspects of the matter and in view of the approval accorded to the proposal by Government of India, Ministry of Environment and Forests, Regional Office (South Zone) Bangalore, Government are pleased to accord its approval under Section 2 of Forest (Conservation) Act, 1980 for diversion of 2.023 ha. of forest land in F.Sy.No. 79 A1 of Bogribail Village in Ankola Taluk, Karwar Division, Uttara Kannada District for dumping of garbage in favour of the Chief Officer, Town Panchayat, Ankola to be implemented by Karnataka Urban Infrastructure Development and Finance Corporation subject to the following conditions.

1. Legal status of forest land shall remain unchanged.
2. Demarcation of the forest area shall be done by cement RCC posts at the cost of user agency.
3. Compensatory Afforestation (CA) over 4.046 ha. of degraded forest land in Sy.No.79A1 of Bogribail shall be raised at the cost of user agency.
4. The funds received from the user agency towards CA and NPV under the project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 with an intimation to Government of India.
5. This shall be treated as a perpetual lease and the total forest area utilized for the project shall not exceed 2.023 ha. and it should be used only for the purpose for which it is granted. In case the land is not used for the stipulated purpose or when it no longer needed for the stipulated purpose the area should automatically revert back to the Forest Department.
6. The lessee has to pay the lease rent as fixed by the Government of Karnataka.
7. The user agency shall pay the cost of raising compensatory afforestation over an area of 4.046 ha. at the rate prevailing at the time of approval (also extraction charges of tree growth as estimated by the Department).
8. The lessee has to pay the Net Present Value (NPV) fixed by the Government Notification No. FEE 247 FGL 2002, dated 17-1-2004.
9. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka,

**P.R. KALAVATHI**

P.R.1103

Under Secretary to Government,

Forest, Ecology and Environment Department.

**ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ**

**ವಿಷಯ:** 2007–2008ನೇ ಸಾಲಿನಲ್ಲಿ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಪ್ರಧಾನ ಮಾಡುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಅಪಜೀ 20 ಇಎನ್‌ಜಿ 2003, ದಿನಾಂಕ 14–5–2003.

**2.** ಸರ್ಕಾರದ ಆದೇಶ ಸಂಖ್ಯೆ: ಅಪಜೀ 20 ಇಎನ್‌ಜಿ 2003, ದಿನಾಂಕ 10–5–2004.

**3.** ಪತ್ರಿಕಾ ಪ್ರಕಟಣೆ ದಿನಾಂಕ 20–5–2007.

**ಪ್ರಸ್ತಾವನೆ:**

ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವ ಸಲುವಾಗಿ 2007–2008ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ನೀಡಲು ಸರ್ಕಾರವು ಉದ್ದೇಶಿಸಿರುತ್ತದೆ. ಈ ಪ್ರಶಸ್ತಿ ತಲಾ ರೂ.1.00 ಲಕ್ಷ (ರೂ ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟುಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಆರಂಭಶೀಲತೆ / ಕೊಡುಗೆ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ರಾಜ್ಯದಲ್ಲಿ ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸಿರುವ ವ್ಯಕ್ತಿ ಹಾಗೂ ಸಂಸ್ಥೆಗಳನ್ನು ಸರ್ಕಾರವು ಆಯ್ಕೆ ಮಾಡಿದ್ದು, ಇವರಿಗೆ ಪರಿಸರ ಪ್ರಶಸ್ತಿಗಳನ್ನು ನೀಡಬೇಕಾಗಿರುತ್ತದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 16 ಇಎನ್‌ಜಿ 2007, ಬೆಂಗಳೂರು, ದಿನಾಂಕ 3ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿ / ಸಂಸ್ಥೆಗಳಿಗೆ 2007–08ನೇ ಸಾಲಿನಲ್ಲಿ ಸರ್ಕಾರವು ಈ ಕೆಳಕಾಣಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಪ್ರಧಾನ ಮಾಡಿದೆ. ಸದರಿ ಪ್ರಶಸ್ತಿಯು ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರ ಒಳಗೊಂಡಿರುತ್ತದೆ.

1) ಶ್ರೀಮತಿ ಸಾಲುಮರದ ತಿಮ್ಮಕ್ಕ, ಉಳಿಕಲ್ ಅಂಚೆ, ಕುದೂರು ಹೋಬಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ
2) ನಟರಾಜ ಗುರುಕುಲ ನೇಚರ್ ಅವೇರ್‌ನೆಸ್ ಅಂಡ್ ಅಡ್ವೆಂಚರ್ ಅಕಾಡೆಮಿ, ಸೋಮನಹಳ್ಳಿ ಅಂಚೆ, ಬೆಂಗಳೂರು ದಕ್ಷಿಣ–560 082
3) ಶ್ರೀ ಎಮ್.ಆರ್. ಪ್ರಭಾಕರ ಅಂಚೆ ಚೀಟಿ ಸಂಗ್ರಹಕಾರರು, ಉದಯನಗರ, ಬಿ.ಎನ್. ಪುರ, ಬೆಂಗಳೂರು–560 016.
4) ಶ್ರೀ ವಿಜಯ್ ಅಂಗಡಿ ನಂ. 2102/ಎ, ರಂಗೋಲಿಹಳ್ಳ, ಹಾಸನ–573201
5) ಚೇತನ ನಗರ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಚಿಕ್ಕಾನವಂಗಲ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ–577 145
6) ಕರ್ನಾಟಕ ರಾಜ್ಯ ಪೋಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ನಂ. 59, ರಿಚ್‌ಮಂಡ್ ರಸ್ತೆ, (ಜನರಲ್ ಕೆ.ಎಸ್. ತಿಮ್ಮಯ್ಯ ರೋಡ್), ಬೆಂಗಳೂರು–560 025
7) ಶ್ರೀ ಕೇಶವ ಹೆಗಡೆ ಕೊರ್ಸೆ ಹಿರಿಯ ಉಪನ್ಯಾಸಕರು ಮತ್ತು ಇಲಾಖಾ ಮುಖ್ಯಸ್ಥರು, ಫಾರ್ಮಕೋಗ್ನೊಸಿ ವಿಭಾಗ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ, ದಕ್ಷಿಣ ಕನ್ನಡ ಜಿಲ್ಲೆ–574 240.
8) ಶ್ರೀ ಕರಿಕಾನ ಪರಮೇಶ್ವರಿ ಗ್ರಾಮ ಅರಣ್ಯ ಸಮಿತಿ ಬಲಿಮನೆ ಆವರಣ, ಎ.ಪಿ.ಎಂ.ಸಿ. ಹತ್ತಿರ, ಹೊನ್ನಾವರ–581334.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಜಗನ್ನಾತ**

ಪಿ.ಆರ್. 1098

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ.

**Forest, Ecology and Environment Secretariat**

**Sub:** Grant of permission for transfer of ML No: 2056/2433, Ubbalagundi Iron Ore Mines, Sandur Taluk by Smt. K.M. Parvatamma, Bellary in favour of M/s Nidhi Mining Private Limited.

**Read:** 1) Government Order No. FEE 26 FFM 97, dated 7-12-1998

2) Letter No. A5(1)MNG.CR.7/2000-01 (KMP), dated 14-11-2006 of the Principal Chief Conservator of Forests, Bangalore.

3) State Government Letter No. FEE 194 FFM 2006, dated 23-12-2006.

4) Letter No. F©A/11.1/106/KAR/288, dated 14-5-2007 of Government of India, Ministry of Environment and Forests, Bangalore.

**Preamble:**

Government in order read at (1) above has accorded approval under Forest (Conservation) Act, 1980 for diversion of 31.835 ha. of forest land at D.M. Block, Sandur Taluk on lease in favour of Smt. K.M. Parvathamma for renewal of M.L.No. 1481/2056 for extraction of iron ore subject to certain conditions.

The Principal Chief Conservator of Forests, Bangalore vide his letter dated 14-11-2006 read at (2) above had submitted proposal to obtain the approval of Government of India for transfer of ML.No.2056/2433 over an area of 31.835 ha. of forest land located in Ubbalagundi Iron ore mines in D.M. Block, Sandur Taluk, Bellary District from M/s K.M. Parvathamma to M/s Nidhi Mining Private Limited, Bellary as per para 2.8 of Chapter of the guidelines and clarification issued by Ministry of Environment and Forests in Forest (Conservation) Act, 1980 with amended rules 2003 and 2004.

The original user agency M/s K.M. Parvathamma has proposed to transfer 31.835 ha. of forest land to the new user agency. The original user agency has submitted N.O.C. for such transfer and new user agency have submitted an under taking that they will abide by all the conditions which may be stipulated by Government of India and Government of Karnataka from time to time.

Accordingly the proposal was recommended to Government of India vide State Government letter dated 23-12-2006 read at (3) above.

Government of India, Ministry of Environment and Forests, New Delhi vide their letter dated 14-5-2007 read at (4) above has conveyed its approval for transfer of mining lease of ML No.2056/2433 over an area of 31.835 ha. of forest land located in Ubbalagundi Iron ore mines in D.M. Block, Sandur Taluk, Bellary District from M/s K.M. Parathamma to M/s Nidhi Mining Private Limited, Bellary.

The proposal has been examined in detail and hence the order.

**Government Order No. FEE 194 FFM 2006, Bangalore, Dated 28th May, 2007**

In the circumstances explained above, Government are pleased to accord sanction as per para 2.8 of chapter of the guidelines and clarification issued by Ministry of Environment and Forests in Forest (Conservation) Act, 1980 with amended rules 2003 and 2004 for transfer of mining lease of ML No. 2056/2433 over an area of 31.835 ha. of forest land located in Ubbalagundi Iron Ore mines in D.M. Block, Sandur Taluk, Bellary District from M/s K.M. Parvathamma to M/s Nidhi Mining Private Limited, Bellary.

The transfer of lease is subject to the condition that the new user agency i.e. M/s Nidhi Mining Private Limited, Bellary shall abide by all the conditions imposed by the Central Government / State Government / Principal Chief Conservator of Forests for diversion of mining lease of ML No. 2056/2433 over an area of 31.835 ha. of forest land located in Ubbalagundi Iron ore mines in D.M. Block, Sandur Taluk, Bellary District in favour of M/s K.M. Parvathamma.

By Order and in the name of the Governor of Karnataka,

**P.R. KALAVATHI**

Under Secretary to Government,

Forest, Ecology and Environment Department.

P.R.1018

**Sub:** Diversion of 2.327 ha. of forest land for construction of 110 KV SC transmission line on DC Tower from 220 KV Bagalkote Sub-Station to 110 KV at Guledgudda of Bagalkote in favour of Karnataka Power Transmission Corporation Limited, Bagalkote.

**Read:** 1) Letter No. A5(2) GFL.CR.15/04-05, dated 18-11-2004 and A5(7) GFL.CR.6/05-06, dated 27-2-2006 of the Principal Chief Conservator of Forests, Bangalore.

2) State Government letter No. FEE 267 FGL 2004, dated 24-10-2005 and 17-3-2006..

3) Government of India Ministry of Environment and Forests, Regional Office, South Zone, Bangalore letter No. 4-KRB055/2005-BAN, dated 12-12-2005 and Letter No. 4-KRB055/2005-BAN/251, dated 16-5-2006.

**Preamble:**

The Principal Chief Conservator of Forests had sent proposal vide his letter dated 18-11-2004 read at (1) above for diversion of 2.42 ha. of forest land for construction of 110 KV SC transmission line on DC tower from 220 KV Bagalkote sub-station to 110 KV at Guledgudda of Bagalkote in favour of M/s Karnataka Power Transmission Corporation Limited, Bagalkote subject to certain conditions. The Principal Chief Conservator of Forests sent a revised proposal reducing the area to 2.327 ha. vide his letter dated 22-9-2005.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide Government letter dated 24-10-2005 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated 12-12-2005 read at (3) above has agreed in-principle subject to the fulfillment of certain conditions.

In compliance of the conditions stipulated by Government of India vide its letter dated 12-12-2005, the Principal Chief Conservator of Forests vide his letter dated 27-2-2006 read at (1) above has sent his compliance report. This compliance report was forwarded to Government of India vide State Government letter dated 17-3-2006 read at (2) above.

Finally Government of India vide its letter dated 16-5-2006 read at (3) above has conveyed its final approval under Section 2 of The Forest (Conservation) Act, 1980 for diversion of 2.327 ha. of forest land for construction of 110 KV SC transmission line on DC tower from 220 KV Bagalkote sub-station to 110 KV at Guledgudda at Sy.No. 1237 of Shirur Village, Bagalkote District in favour of M/s Karnataka Power Transmission Corporation Limited, Bagalkote subject to certain conditions. Hence the order.

**Government Order No. FEE 267 FGL 2004, Bangalore,**
**Dated 19th February, 2007**

After examining all aspects of the matter and in view of the approval accorded to the proposal by Government of India, Ministry of Environment and Forests, Regional Office (South Zone) Bangalore, Government are pleased to accord its approval under Section 2 of Forest (Conservation) Act, 1980 for diversion of 2.327 ha. of forest land construction of 110 KV SC transmission line on DC tower from 220 KV Bagalkote sub-station to 110 KV at Guledgudda at Sy.No. 1237 of Shirur Village, Bagalkote Division, Bagalkote District in favour of M/s Karnataka Power Transmission Corporation Limited, Bagalkote subject to the following conditions.

1. Legal status of forest land shall remain unchanged.
2. Compensatory Afforestation (CA) shall be raised over 5.00 ha. of degraded forest land at the cost of user agency.
3. The total forest area utilized for the project shall not exceed 2.327 ha. It should be used only for the purpose for which it is diverted. In case the land is not used for the

stipulated purpose or when it is no longer needed for the stipulated purpose, the area shall be resumed by the Local Forest Department.

4. Only minimum number of trees shall be cut based on actual requirement for laying the KV line.
5. All the funds received from the user agency under the project shall be transferred to the Compensatory Afforestation Fund Management and Planning Authority (CAMPA).
6. The lessee shall pay lease rent as fixed by the Government from time to time.
7. The diversion of said scheduled forest land may be granted for 30 years from the date of notification by State Government and total forest area utilized for the project shall not be exceeded 2.327. It should be used only for the purpose for which it is diverted. In case the land is not used for the stipulated purpose or when it is no longer needed for the stipulated purpose the area would automatically be a part of the notified forest and under the control of Forest Department.
8. The user agency has to pay the Net Present Value (NPV) fixed by the Government Notification No. FEE 247 FGL 2002, dated 17-1-2004.
9. Compensatory afforestation shall be raised at the cost of user agency over an extent of 5.00 ha. degraded forest land at the rate of prevailing at the time of approval (at present it is Rs. 54,200/- per ha).
10. The user agency shall pay the cost of extraction charges of trees as estimated by the concerned Deputy Conservator of Forests from the proposed land.
11. Any violation will be dealt under Karnataka Forest Act, Karnataka Forest Rules, Forest (Conservation) Act, 1980 and Forest (Conservation) Rules, 2003.
12. The user agency shall abide by all the conditions imposed upon by Government of India, Government of Karnataka and Principal Chief Conservator of Forests.
13. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka,

**P.R. KALAVATHI**

P.R. 394

Under Secretary to Government,
Forest, Ecology and Environment Department.

**Sub:** Diversion of 0.99 ha. of forest land in Ft.Sy.No. 193A Algeri Village for the construction of 33 KV SC link line from 110 KV Sub-Station Ankola (Baleguli) to existing 33 KV Karwar-Ankola line and Strengthening of existing 33 KV line for arranging power supply to proposed 33 KV S/S @ N.K. Bail and proposed 33 KV S/S@ Amdahalli, North Canara District by coyote conductor under deposit contribution work of Sea-bird Authority.

**Read:** 1) Letter No. A5(2) GFL.CR.28/06-07, dated 1-12-2006 of Principal Chief Conservator of Forests, Bangalore.

2) Letter No. F.No.11-9/98-FC, dated 3-1-2005 of Government of India, Ministry of Environment and Forests, New Delhi.

**Preamble:**

The Principal Chief Conservator of Forests, Bangalore vide his letter dated 1-12-2006 read at (1) above has submitted a proposal for diversion of 0.99 ha. of forest land in Ft.Sy.No. 193A Algeri Village for the construction of 33 KV SC link line from 110 KV Sub-Station Ankola (Baleguli) to existing 33 KV Karwar-Ankola line and Strengthening of existing 33 KV line for arranging power supply to proposed 33 KV S/S @ N.K. Bail and proposed 33 KV S/S@ Amdahalli, North Canara District by coyote conductor under deposit contribution work of Sea-

bird Authority in favour of Executive Engineer (Elect), North Canara, U.K. District subject to certain conditions.

The Government of India, Ministry of Environment and Forests, New Delhi vide their letter dated 3-1-2005 read at (2) above have conveyed general approval under Section 2 of Forest (Conservation) Act, 1980 for diversion of land to Government Departments for certain activities.

This proposal has been examined under the General approval of Government of India in its letter dated 3-1-2005 and it has been decided to accord sanction for utilizing an area of 0.99 ha. of forest land in Ft.Sy.No. 193A Algeri Village for construction of 33 KV SC link line from 110 KV Sub-Station Ankola (Baleguli) to existing 33 KV line Karwar-Ankola line and Strengthening of existing 33 KV line for arranging power supply to proposed 33 KV S/S @ N.K. Bail and proposed 33 KV S/S@ Amdahalli, North Canara District by coyote conductor under deposit contribution work of Sea-bird Authority.

The proposal has been examined in detail and Hence this Order.

**Government Order No. FEE 169 FGL 2006, Bangalore, Dated 1st March, 2007**

In the circumstances explained in the preamble and in accordance with the approval of Government of India in the letter dated 3-1-2005, the Government of Karnataka are pleased to accord approval under section (2) of Forest (Conservation) Act 1980 for diversion of 0.99 ha. of forest land in Ft.Sy.No. 193A Algeri Village for the construction of 33 KV SC link line from 110 KV Sub-Station Ankola (Baleguli) to existing 33 KV line Karwar-Ankola line and Strengthening of existing 33 KV line for arranging power supply to proposed 33 KV S/S @ N.K. Bail and proposed 33 KV S/S@ Amdahalli, North Canara District by coyote conductor under deposit contribution work of Sea-bird Authority in favour of Executive Engineer (Elect), North Canara, U.K. District subject to the following conditions.

1. The Legal status of forest land will continue to be as forest land.
2. The land shall be utilized only for the purpose for which it is released.
3. If the land is not required for the purpose for which it is granted the same should be resumed back to the Forest Department by the Conservator of Forests under section 82 of Karnataka Forest, Act, 1963.
4. The user agency has to pay the lease rent as fixed by the Government at the time of sanction and any subsequent orders in this regard.
5. The lease is granted for 30 years.
6. Karnataka Forest Act 1963 and Rules 1969 will be applicable for any violation.
7. Only minimum number of trees shall be cut out of enumerated list based on actual requirement of the project.
8. The user agency shall pay the extraction and transportation charges of trees as estimated by the Deputy Conservator of Forests from the proposed land.
9. The user agency shall pay the cost of raising plantation of ten times of number of trees likely to be felled as estimated by the Deputy Conservator of Forests.
10. The user agency has to pay the Net Present Value as per the Government Notification dated 17-1-2004 at Rs. 5.80 lakhs to Rs. 9.20 lakhs per ha. depending upon the quantity and density of the land as determined by Deputy Conservator of Forests, Karwar.
11. Any other condition imposed by the Government of India / Government of Karnataka will have to be abided by the lessee.

By Order and in the name of the Governor of Karnataka,

**P.R. KALAVATHI**

P.R. 404

Under Secretary to Government,
Forest, Ecology and Environment Department.

ರಿ.ಸ.ನಂ.4ಕ್ಕೆ ಸಂಬಂಧಿಸಿದಂತೆ ಭೂ ನ್ಯಾಯಮಂಡಳಿಯ ಆದೇಶ ಕುರಿತು ಸದರಿ ಸರ್ವೆ ನಂಬರಿನ ಹೆ:ರದ ಪಟ್ಟಾ ಕಾಲಂದಲ್ಲಿ ಗಾಯರಾಣಾ ಅಂತಾ ನಮೂದು ಇದ್ದರೂ ಅದನ್ನು ಪರಿಶೀಲಿಸದೇ ಗೇಣಿ ಅರ್ಜಿಯನ್ನು ಭೂ ನ್ಯಾಯ ಮಂಡಳಿ ಮುಂದೆ ಇಟ್ಟಿರುವುದು ಗೇಣಿ ಜಮೀನೆಂದು ನಮೂನೆ 7ರಲ್ಲಿ ಹಾಕಿದ ಅರ್ಜಿಯನ್ನು ದಿನಾಂಕ 2–10–1965 ರಿಂದ 1–3–1974ರ ವರೆಗೆ ಹಾಗೂ ತದನಂತರ ಹೆಸರು ಕಡಿಮೆಯಾದ ಬಗ್ಗೆ ಸಂಬಂಧಿಸಿದ ದಾಖಲೆಗಳೊಂದಿಗೆ ಪರಿಶೀಲಿಸಿ ಪರಿಶೀಲನಾ ಪಟ್ಟಿಯೊಂದಿಗೆ ಭೂ ನ್ಯಾಯ ಮಂಡಳಿ ಅಧ್ಯಕ್ಷರಿಗೆ ಸಲ್ಲಿಸದೆ, ಇರುವುದು, ಸದರಿ ಅರ್ಜಿದಾರರ ಹೆಸರು ಇತರೆ ಹಕ್ಕಿನಲ್ಲಿ ಸಾದಾ ಕುಳವೆಂದು ದಾಖಲಿದ್ದರೂ ಅದರ ದಾಖಲಾತಿ ಇಲ್ಲದೇ ಇದ್ದುದನ್ನು ಪರಿಶೀಲಿಸಿ ಅಧ್ಯಕ್ಷರ ಗಮನಕ್ಕೆ ತರದಿರುವುದು, ಹಾಗೂ ಭೂ ನ್ಯಾಯಮಂಡಳಿಯ ಅಧ್ಯಕ್ಷರು ತಮ್ಮ ಅಸಮ್ಮತಿ ಸೂಚಿಸಿ ಸದಸ್ಯರ ಬಹುಮತವಿದ್ದುದರಿಂದ ಬಹುಮತ ನಿರ್ಣಯದ ಆದೇಶವನ್ನು ಮಾಡಿದ್ದು, ಇದೊಂದು ಡಿಸೆಂಡಿಂಗ್ ಆದೇಶವಿದ್ದು, ಇದನ್ನು ಸರ್ಕಾರಕ್ಕೆ ಪರಿಶೀಲನೆಗಾಗಿ ಕಳುಹಿಸುವ ಮೊದಲು ತರಾತುರಿಯಲ್ಲಿ ನಮೂನೆ ನಂ. 10ನ್ನು ಕೊಟ್ಟಿರುವ ಗಂಭೀರ ಕರ್ತವ್ಯ ಲೋಪದ ಬಗ್ಗೆ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ 27–1–2006ರ ಆದೇಶದಲ್ಲಿ ಶ್ರೀ ಎಸ್.ಎನ್. ಧಾರವಾಡಕರ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನಂ. 1 ಸೆಕ್ಟರ್ 33 ಬಿಲ್ಡ್, ಡಿ.ಸಿ. ರೆಸಿಡೆನ್ಸಿ ನವನಗರ, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕಮಾಡಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು, ಬಾಗಲಕೋಟೆ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಶ್ರೀ ಎಸ್.ಎಸ್. ಧಾರವಾಡಕರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಾಗಲಕೋಟೆ ಇವರು ಪ್ರಸ್ತುತ ಬಾಗಲಕೋಟೆ ಜಿಲ್ಲೆಯಲ್ಲಿ ಇರುವುದಿಲ್ಲವೆಂದು ತಿಳಿದು ಬಂದಿರುತ್ತದೆಂದು, ಬೇರೊಬ್ಬ ವಿಚಾರಣಾಧಿಕಾರಿಗಳನ್ನು ನೇಮಿಸುವಂತೆ ಮೇಲೆ ಓದಲಾದ ಕ್ರ.ಸಂ.(2)ರಲ್ಲಿ ದಿನಾಂಕ 20–11–2006ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು, ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಈ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಪ್ರಕರಣದಲ್ಲಿ ನೇಮಿಸಿರುವ ವಿಚಾರಣಾಧಿಕಾರಿಯನ್ನು ಬದಲಿಸಿ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 46 ಎಡಿಇ 2004, ಬೆಂಗಳೂರು, ದಿನಾಂಕ 21ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 46 ಎಡಿಇ 2004, ದಿನಾಂಕ 21–7–2006ರಲ್ಲಿ ಶ್ರೀ ಎಸ್.ಡಿ. ಘೀವಾರಿ, ಹಿಂದಿನ ತಹಶೀಲ್ದಾರ್, ಬಾಗಲಕೋಟೆ ಹಾಗೂ ಕಾರ್ಯದರ್ಶಿ, ಭೂ ನ್ಯಾಯ ಮಂಡಳಿ, ಬಾಗಲಕೋಟೆ ಹಾಲಿ ನಿವೃತ್ತ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಶ್ರೀ ಎಸ್.ಎಸ್. ಧಾರವಾಡಕರ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1 ಸೆಕ್ಟರ್, 33 ಒಲ್ಡ್ ಡಿ.ಸಿ. ರೆಸಿಡೆನ್ಸಿ, ನವನಗರ, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವುದನ್ನು ಮಾರ್ಪಡಿಸಿ ಶ್ರೀ ಎನ್.ಎಂ. ಗದಗ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಹೇಶ್ ನಿಲಯ, ವಾಕ್‌ಚಾಲ (Waik Chawl) ಪಿ.ಬಿ. ರೋಡ್, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ ಹಾಗೂ ಪ್ರಕರಣದ ಮಂಡನಾಧಿಕಾರಿಯವರನ್ನು ದಿನಾಂಕ 21–7–2006ರ ಆದೇಶದಲ್ಲಿರುವವರನ್ನೇ ಮುಂದುವರೆಸಿದೆ. ಉಳಿದಂತೆ ದಿನಾಂಕ 21–7–2006ರಲ್ಲಿರುವ ಸೂಚನೆಗಳು ಅನ್ವಯವಾಗುತ್ತವೆ. ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು, 1957ರ ನಿಯಮ 11 ಮತ್ತು 11ಎರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 368

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಪತ್ರ ಸಂ: ಇಎಸ್‌ಟಿ(2)/ಸಿಆರ್/10/2005–06, ದಿನಾಂಕ 5–9–2005.
2. ಕಾರಣ ಕೇಳುವ ನೋಟೀಸು ದಿನಾಂಕ 21–12–2005.
3. ಶ್ರೀ ಪಿ. ಸುಬ್ಬಾ ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು, ಇವರ ಲಿಖಿತ ಸಮಜಾಯಿಷಿ ದಿನಾಂಕ 6–1–2006.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 70 ಎಡಿಇ 2006, ದಿನಾಂಕ 13–10–2006.

**ಪ್ರಸ್ತಾವನೆ:**

ಶ್ರೀ ಪಿ. ಸುಬ್ಬಾ, ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು ಇವರು ಹಿಂದೆ ಹುಣಸೂರು ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಣಸೂರು ತಾಲ್ಲೂಕು ಕಛೇರಿಯ ಪಿ.ಡಿ. ಅಕೌಂಟ್‌ನಿಂದ 2005ರ

ಮಾರ್ಚ್ ಮಾಹೆಯಲ್ಲಿ ರೂ. 3.00 ಲಕ್ಷಗಳ ಮೊಬಲಗನ್ನು ಮೇಲಾಧಿಕಾರಿಗಳ ಆದೇಶವಿಲ್ಲದೆ ನಗದೀಕರಿಸಿದ್ದು, ಮತ್ತು ಇದೇ ಅವಧಿಯಲ್ಲಿ ಉಪವಿಭಾಗಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯದೇ 1961ರ ಕರ್ನಾಟಕ ಭೂ ಸುಧಾರಣಾ ಕಾಯ್ದೆ ಕಲಂ 79(ಎ) ಮತ್ತು 79(ಬಿ) ಅನ್ನು ಉಲ್ಲಂಘಿಸಿ ತಮ್ಮ ಪತ್ನಿ ಶ್ರೀಮತಿ ರತ್ನಮ್ಮ ಬಿನ್ ಕುಟ್ಟಪ್ಪನ್, ಮಗಳು ಸಂಧ್ಯಾ ಕೋಂ ಸುರೇಶ, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಬಾವಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳಿಗೆ ಕೃಷಿ ಕಾರ್ಮಿಕ ದೃಢೀಕರಣ ಪತ್ರಗಳನ್ನು ಸೃಷ್ಟಿಸಿ, ಇವರುಗಳ ಹೆಸರುಗಳಲ್ಲಿ ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101ರಲ್ಲಿ 11 ಎಕರೆ 0.09 ಗುಂಟೆ ಜಮೀನನ್ನು 5,92,000/– ರೂಗಳಿಗೆ ಅಕ್ರಮವಾಗಿ ಖರೀದಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಿರುತ್ತಾರೆಂದು ಹಾಗೂ ಶ್ರೀಯುತರು ಈ ಹಿಂದೆ ಹುಣಸೂರು ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101ರಲ್ಲಿ 11 ಎಕರೆ 0.09 ಗುಂಟೆ ಜಮೀನನ್ನು ತಮ್ಮ ಪತ್ನಿ ರತ್ನಮ್ಮ ಬಿನ್ ಕುಟ್ಟಪ್ಪನ್ ಮಗಳು ಸಂಧ್ಯ ಕೋಂ ಸುರೇಶ್, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಭಾವಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳ ಹೆಸರಿನಲ್ಲಿ ದಿನಾಂಕ 7–4–2005ರಂದು ಖರೀದಿ ಮಾಡಿದ ನಂತರ ಹುಣಸೂರು ಉಪನೋಂದಣಾಧಿಕಾರಿಗಳಿಂದ ದಿನಾಂಕ 3–5–2005ರಂದು ಸ್ವೀಕೃತವಾದ "ಜೆ ಮ್ಯೂಟೇಷನ್‌ಗಳ ಸಂಬಂಧವಾಗಿ ದಿನಾಂಕ 4–5–2005ರಂದು ಅಧಿಕೃತ ಜ್ಞಾಪನ ಹೊರಡಿಸಿ, ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101ರಲ್ಲಿ 11 ಎಕರೆ 0.09 ಗುಂಟೆ ಜಮೀನು, 1961ರ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 79(ಎ) ಮತ್ತು (ಬಿ)ಯ ಉಲ್ಲಂಘನೆಯಾಗಿಲ್ಲವೆಂದೂ ಕಿರಜಾಜಿ ಜಮೀನಿನ ವ್ಯಾಪ್ತಿಯಲ್ಲಿ ಬರುವ ಕಸಬಾ ಹೋಬಳಿ ರಾಜಸ್ವ ನಿರೀಕ್ಷಕರಿಗೆ ಸೂಚನೆ ನೀಡಿ, ರಾಜಸ್ವ ನಿರೀಕ್ಷಕರಿಂದ ದಿನಾಂಕ 4–5–2005ರಂದೇ ಖರೀದಿದಾರರ ಹೆಸರಿಗೆ ಖಾತೆ ಬದಲಾವಣೆ ಆದೇಶ ಹೊರಡಿಸಿ ಸಂಬಂಧಪಟ್ಟ ಜಮೀನಿನ ಆರ್‌ಟಿಸಿಯಲ್ಲಿ ಖರೀದಿದಾರರಾದ, ತಮ್ಮ ಪತ್ನಿ ರತ್ನಮ್ಮ ಬಿನ್ ಕುಟ್ಟಪ್ಪನ್, ಮಗಳು ಸಂಧ್ಯ ಕೋಂ ಸುರೇಶ, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಬಾಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳ ಹೆಸರಿನಲ್ಲಿ ಆರ್‌ಟಿಸಿ ಇಂಡೀಕರಣ ಮಾಡಿಸಿ, ಕರ್ತವ್ಯಲೋಪವೆಸಗಿ 1966ರ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳ ನಿಯಮ 3(i) (ii) (iii)ಅನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪಗಳ ಮೇಲೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ. 1ರ ದಿನಾಂಕ 5–9–2005ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ 21–12–2005ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಗಳನ್ನು (ಅನುಬಂಧ 1 ರಿಂದ 4ರವರೆಗೆ) ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು ಇವರು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ದಿನಾಂಕ 13–10–2006ರ ಆದೇಶದಲ್ಲಿ ಶ್ರೀ ಪಿ. ಸುಬ್ಬಾ, ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುತ್ತದೆ. ಈ ಅಮಾನತ್ತು ಆದೇಶದ ವಿರುದ್ಧ ಮಾನ್ಯ ಕೆ.ಎ.ಟಿಯಲ್ಲಿ ಅರ್ಜಿ ಸಂ. 7816/06ರಲ್ಲಿ ಪ್ರಶ್ನಿಸಿ ಆದೇಶದ ವಿರುದ್ಧ ತಡೆಯಾಜ್ಞೆ ತಂದಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖೆ ವಿಚಾರಣೆಯನ್ನು ಜರುಗಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 49 ಎಡಿಇ 2005(ಭಾಗ–1), ಬೆಂಗಳೂರು, ದಿನಾಂಕ 5ನೇ ಮಾರ್ಚ್, 2007**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿದ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು ಮೈಸೂರು ಜಿಲ್ಲೆ, (ಪ್ರಸ್ತುತ ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ) ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1171, (HIG), 10th 'B' Cross, Yelahanka New Town, Bangalore-560 064 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ 23–8–2005ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಮೈಸೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 416 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಸಿ.ಎಂ. ಹಿರೇಮಠ್, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲಾಧಿಕಾರಿಗಳ ಕಛೇರಿ, ಹಾಗೂ ಅಧಿಕ ಪ್ರಭಾರದಲ್ಲಿ ಶಿರಹಟ್ಟಿ ತಹಶೀಲ್ದಾರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರು ಮಾನ್ಯ ಮುಖ್ಯಮಂತ್ರಿಗಳ ಮತ್ತು ಸರ್ಕಾರದ ಬಗ್ಗೆ ನಿಂದನಾರ್ಹವಾಗಿ ಸರ್ಕಾರಿ ಅಧಿಕಾರಿ / ನೌಕರರಿಗೆ ಸಲ್ಲದ ರೀತಿಯಲ್ಲಿ ಮಾಡಿದ ಟೀಕೆಗಾಗಿ ಅಮಾನತ್ತುಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ಶ್ರೀ ಸಿ.ಎಂ. ಹಿರೇಮಠ್, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲಾಧಿಕಾರಿಗಳ ಕಛೇರಿ, ಹಾಗೂ ಅಧಿಕ ಪ್ರಭಾರದಲ್ಲಿ ಶಿರಹಟ್ಟಿ ತಹಶೀಲ್ದಾರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮಾನ್ಯ ಮುಖ್ಯಮಂತ್ರಿಗಳ ಬಗ್ಗೆ ಹಾಗೂ ಸರ್ಕಾರದ ಬಗ್ಗೆ ನಿಂದನಾರ್ಹವಾಗಿ ಸರ್ಕಾರಿ ಅಧಿಕಾರಿ / ನೌಕರರಿಗೆ ತರವಲ್ಲದ ರೀತಿಯಲ್ಲಿ ಟೀಕೆಗಳನ್ನು ಮಾಡಿದ್ದು, ಅದು ವೃತ್ತ ಪತ್ರಿಕೆಗಳಲ್ಲಿ ಈ ದಿನದ (ದಿನಾಂಕ 5–3–2007) ಕನ್ನಡಪ್ರಭ, ವಿಜಯ ಕರ್ನಾಟಕ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ವರದಿಯಾಗಿದ್ದು, ಇದು ಸರ್ಕಾರದ ಅಧಿಕಾರಿ / ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಂತಾಗಿದ್ದು, ಘೋರ ಕರ್ತವ್ಯಲೋಪ ಎಸಗಿರುತ್ತಾರೆ. ಸರ್ಕಾರದ ಅಧಿಕಾರಿಯಾಗಿ ತರವಲ್ಲದ ರೀತಿಯಲ್ಲಿ ಸರ್ಕಾರವನ್ನು ನಿಂದನೆ ಮಾಡಿ ಕರ್ತವ್ಯ ಲೋಪ ಎಸಗಿರುವ ಹಿನ್ನಲೆಯಲ್ಲಿ ಶ್ರೀ ಸಿ.ಎಂ. ಹಿರೇಮಠ್ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದನ್ನು ಬಾಕಿಯಿಟ್ಟು, ಇವರನ್ನು ಅಮಾನತ್ತು ಮಾಡಲು ಸರ್ಕಾರವು ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 07 ಎಡಿಇ, ಬೆಂಗಳೂರು, ದಿನಾಂಕ 5ನೇ ಮಾರ್ಚ್, 2007**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಶ್ರೀ ಸಿ.ಎಂ. ಹಿರೇಮಠ್, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲೆ ಹಾಗೂ ಅಧಿಕ ಪ್ರಭಾರ ತಹಶೀಲ್ದಾರ್, ಶಿರಹಟ್ಟಿ ತಾಲ್ಲೂಕು ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ ನಿಯಮ 10(1)(ಡಿ)ಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಕೂಡಲೇ ಜಾರಿಗೆ ಬರುವಂತೆ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದನ್ನು ಬಾಕಿಯಿರಿಸಿ, ಅಮಾನತ್ತುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 438 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೂಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂಬರ್ 40ರ ಸರ್ಕಾರಿ ಭೂಮಿಯಲ್ಲಿ 12.00 ಎಕರೆ ವಿಸ್ತೀರ್ಣವನ್ನು ಅಕ್ರಮವಾಗಿ ಮಂಜೂರು ಮಾಡಿರುವ ಆರೋಪಕ್ಕೆ ಸಂಬಂಧಿಸಿದಂತೆ, ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಪ್ರಸ್ತುತ ನಿವೃತ್ತ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರ ಪ್ರಸ್ತಾವನೆ ಸಂ: ಸಿಬ್ಬಂದಿ (2):ಸಿಆರ್ 90/2005–06, ದಿನಾಂಕ 26–12–2005.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 64 ಎಡಿಇ 2005, ದಿನಾಂಕ 28–12–2005.
3. ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ರಕ್ಷಣಾ ಹೇಳಿಕೆ ದಿನಾಂಕ 30–1–2006.
4. ಶ್ರೀ ರಾಮಚಂದ್ರ ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಪ್ರಸ್ತುತ

ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ರಕ್ಷಣಾ ಹೇಳಿಕೆ ದಿನಾಂಕ 30–1–2006.

5. ಶ್ರೀ ದೊಡ್ಡೇಗೌಡ, ಸೂಪರ್‌ವೈಸರ್, ಇವರ ರಕ್ಷಣಾ ಹೇಳಿಕೆ ದಿನಾಂಕ 30–1–2006.
6. ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ಇವರ ರಕ್ಷಣಾ ಹೇಳಿಕೆ ದಿನಾಂಕ 30–1–2006
7. ಶ್ರೀ ಹೆಚ್.ವಿ. ಸತ್ಯನಾರಾಯಣ, ಗ್ರಾಮ ಲೆಕ್ಕಿಗರು, ಕೆ. ಗೊಲ್ಲಹಳ್ಳಿ ವೃತ್ತ, ಇವರ ರಕ್ಷಣಾ ಹೇಳಿಕೆ ದಿನಾಂಕ 5/7–1–2006.
8. ಶ್ರೀ ಲಕ್ಷ್ಮೀನಾರಾಯಣ, ಗ್ರಾಮ ಲೆಕ್ಕಿಗ, ಆನೇಕಲ್ ತಾಲ್ಲೂಕು, ಇವರ ರಕ್ಷಣಾ ಹೇಳಿಕೆ ದಿನಾಂಕ 3–1–2006
9. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಬರೆದ ಸರ್ಕಾರದ ಪತ್ರ ಸಂ. ಆರ್‌ಡಿ 64 ಎಡಿಇ 2005, ದಿನಾಂಕ 8–6–2006
10. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಸಿಸಿಎ (2) ಸಿಆರ್:90/ 2005–06, ದಿನಾಂಕ 31–10–2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 26–12–2005ರ ಪ್ರಸ್ತಾವನೆಯಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕುಂಬಳಗೂಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂಬರ್ 40ರ ಸರ್ಕಾರಿ ಗೋಮಾಳದ ಜಮೀನಿನಲ್ಲಿ (1) ಆರ್. ಸುರೇಶ್ ಬಿನ್ ಹೆಚ್. ರಮೇಶ್ (2) ಶ್ರೀ ಎಂ. ಮಂಜುನಾಥ್ ಬಿನ್ ಮಹಲಿಂಗಪ್ಪ, (3) ಶ್ರೀಮತಿ ಎಂ.ಎಸ್. ರಾಜೇಶ್ವರಿ ಬಿನ್ ಎಂ.ಎಸ್. ಶಿವರಾಮಯ್ಯ ಇವರಿಗೆ ತಲಾ 4–00 ಎಕರೆಯಂತೆ ಒಟ್ಟು 12.00 ಎಕರೆ ವಿಸ್ತೀರ್ಣವನ್ನು ನಮೂನೆ 53ರಲ್ಲಿ ಅರ್ಜಿ ಸ್ವೀಕರಿಸಿ ನಿಯಮಬಾಹಿರವಾಗಿ ಮಂಜೂರು ಮಾಡಿ ಭೂ ಕಂದಾಯ ನಿಯಮ 1964 ನಿಯಮ 108(ಸಿ), 108(ಡಿ) (i) (ii) (ii i)ಉಲ್ಲಂಘನೆಯಾಗಿರುವುದಾಗಿ ಈ ಪ್ರಕರಣದಲ್ಲಿ ಈ ಕೆಳಕಂಡ ಅಧಿಕಾರಿ / ನೌಕರರು ಭಾಗಿಯಾಗಿದ್ದು, ಸದರಿಯವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1) ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು.
2) ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, (ಪ್ರಸ್ತುತ ನಿವೃತ್ತರು).
3) ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ರಾಮಚಂದ್ರಪುರ ವೃತ್ತ, ಬೆಂಗಳೂರು ಉತ್ತರ ತಾಲ್ಲೂಕು (ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ)
4) ಶ್ರೀ ಸತ್ಯನಾರಾಯಣಸ್ವಾಮಿ, ಗ್ರಾಮ ಲೆಕ್ಕಿಗ, ಕೆ. ಗೊಲ್ಲಹಳ್ಳಿ
5) ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ಆನೇಕಲ್ (ಹಿಂದಿನ ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ವೃತ್ತ).
6) ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ಬೆಂಗಳೂರು ಉತ್ತರ ತಾಲ್ಲೂಕು, ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು.

ಸರ್ಕಾರವು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ತಿಳಿಸಿದ ಕ್ರ.ಸಂ. (1)ರಿಂದ (6)ರವರೆಗಿನ ಅಧಿಕಾರಿ/ನೌಕರರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 13ರ ಅನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು, ನಿಯಮ 11ರಡಿಯಲ್ಲಿ ಮೇಲೆ ಓದಲಾದ ಕ್ರ.ಸಂ. (2)ರನ್ವಯ ಕಾರಣ ಕೇಳುವ ನೋಟಿಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ (ಅನುಬಂಧ 1 ರಿಂದ 4ರವರೆಗೆ) ಜಾರಿಗೊಳಿಸಿ ದೋಷಾರೋಪಣೆಗೆ ಸಂಬಂಧಿಸಿದಂತೆ, ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಸದರಿ ದೋಷಾರೋಪಣಾ ಪಟ್ಟಿಗೆ ಸಂಬಂಧಿಸಿದಂತೆ ಕ್ರ.ಸಂ. (1) ರಿಂದ (6)ರವರೆಗಿನ ಅಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (3) ರಿಂದ (8)ರವರೆಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ರಕ್ಷಣಾ ಹೇಳಿಕೆ ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಕಳುಹಿಸಿ ಉತ್ತರದಲ್ಲಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ತಮ್ಮ ಅಭಿಪ್ರಾಯ ನೀಡುವಂತೆ ಮೇಲೆ ಓದಲಾದ ಕ್ರ.ಸಂ. (9)ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ತಮ್ಮ ಅಭಿಪ್ರಾಯದ ವರದಿಯನ್ನು ಮೇಲೆ ಓದಲಾದ ಕ್ರ.ಸಂ.(10)ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ನೀಡಿರುವ ರಕ್ಷಣಾ ಹೇಳಿಕೆಯನ್ನು ಹೊರತುಪಡಿಸಿ, ಉಳಿದ ಆರೋಪಿತ ಅಧಿಕಾರಿ / ನೌಕರರು ಸಲ್ಲಿಸಿರುವ ರಕ್ಷಣಾ ಹೇಳಿಕೆ ಮತ್ತು ಒದಗಿಸಿರುವ ದಾಖಲೆಗಳಲ್ಲಿ ಸಮರ್ಥನೆ ಮಾಡುವಂತ ಯಾವುದೇ ಸಮಜಾಯಿಷಿ ಮತ್ತು ದಾಖಲಾತಿಗಳು ಇಲ್ಲದಿರುವುದರಿಂದ ಈ ಕೆಳಕಂಡ ಆಪಾದಿತ ಅಧಿಕಾರಿ / ನೌಕರರುಗಳಾದ

1) ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, (ಪ್ರಸ್ತುತ ನಿವೃತ್ತರು).
2) ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು (ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು.)
3) ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು (ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ, ಕೆಂಗೇರಿ ಹೋಬಳಿ)
4) ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಆನೇಕಲ್
5) ಶ್ರೀ ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ.

ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿದೆ ಹಾಗೂ ಶ್ರೀ ರಾಮಚಂದ್ರ ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರು ತಮ್ಮ ಲಿಖಿತ ಹೇಳಿಕೆಯಲ್ಲಿ ಅರ್ಜಿದಾರರಾದ ಶ್ರೀ ಆರ್. ಸುರೇಶ್, ಶ್ರೀ ಮಂಜುನಾಥ್, ಶ್ರೀಮತಿ ರಾಜೇಶ್ವರಿ ಇವರುಗಳು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 94(ಎ) ಅನ್ನು ಕರ್ನಾಟಕ ಲ್ಯಾಂಡ್ ರೆವಿನ್ಯೂ ನಿಯಮಗಳು 1966ರ ನಿಯಮ 108ಸಿಸಿ(1) ರೊಂದಿಗೆ ಓದಿಕೊಂಡಂತೆ ದಿನಾಂಕ 24–6–1999ರಂದು ಫಾರಂ 53ರಲ್ಲಿ ಸಲ್ಲಿಸಿರುವ ಅರ್ಜಿಗಳನ್ನು ಗ್ರಾಮ ಲೆಕ್ಕಿಗರು, ರಾಜಸ್ವ ನಿರೀಕ್ಷಕರು ಮತ್ತು ಮೋಜಣಿದಾರರು ದಾಖಲಾತಿಗಳೊಂದಿಗೆ ಕಡತ ಸಲ್ಲಿಸಿರುತ್ತಾರೆ. ವಿಷಯ ನಿರ್ವಾಹಕರು ಶಿರಸ್ತೇದಾರರು ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಅರ್ಜಿಗಳು ತಾಲ್ಲೂಕು ಕಛೇರಿಯಲ್ಲಿ ಫಾರಂ 51ರ ವಹಿಯಲ್ಲಿ ದಾಖಲಾಗದೆ ಇದ್ದುದರಿಂದ ಈ ದಾಖಲೆಗಳನ್ನು ದೃಢೀಕರಿಸದೇ ತಹಶೀಲ್ದಾರರೇ ಸಮಿತಿಯ ಕಾರ್ಯದರ್ಶಿಯಾಗಿದ್ದು, ಸಮಿತಿಯ ನಡವಳಿ ಕ್ರ.ಸಂ. 16ರಂತೆ ಸದರಿ ವಿಚಾರವನ್ನು ಸಮಿತಿಯ ಮುಂದೆ ಮಂಡಿಸಲಾಗಿದೆ; ಸಮಿತಿಯು ಈ ವಿಚಾರವನ್ನು ಉಲ್ಲೇಖಿಸಿ ಸಮಿತಿಯ ಕಾರ್ಯದರ್ಶಿಗಳು ಖುದ್ದು ಪರಿಶೀಲಿಸಿ ಕಾನೂನು ರೀತಿಯಲ್ಲಿ ಕ್ರಮ ಕೈಗೊಳ್ಳಲು ಸೂಚಿಸಿರುತ್ತಾರೆಂದೂ, ನಂತರ, ಇವರು ವರ್ಗಾವಣೆಯಾಗಿದ್ದು, ತದನಂತರ ಬಂದ ತಹಶೀಲ್ದಾರರು ಸಮಿತಿಯ ಒಪ್ಪಿಗೆಯನ್ನು ಪಡೆಯದೇ ಸಾಗುವಳಿ ಚೀಟಿ ವಿತರಿಸಿರುವುದು ಕಾನೂನು ಉಲ್ಲಂಘನೆಯಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಈ ಅಂಶಗಳನ್ನು ಪರಿಶೀಲಿಸಿದಾಗ ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಇವರು ಸಮಿತಿಯ ಕಾರ್ಯದರ್ಶಿಗಳಾಗಿ ಖುದ್ದು ಪರಿಶೀಲಿಸಿ ನಿರ್ಣಯ ಕೈಗೊಳ್ಳುವ ಹಂತದಲ್ಲಿ ವರ್ಗಾವಣೆಯಾಗಿರುವುದರಿಂದ ಹಾಗೂ ಸಕ್ರಮ ಕೋರಿರುವ ಅರ್ಜಿಗಳ ಬಗ್ಗೆ ಯಾವುದೇ ತೀರ್ಮಾನ ಕೈಗೊಂಡಿಲ್ಲದ ಕಾರಣ ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ರಕ್ಷಣೆ ಹೇಳಿಕೆಯನ್ನು ಒಪ್ಪಿಕೊಂಡು ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ, ಇಲಾಖಾ ವಿಚಾರಣೆಯಿಂದ ಕೈಬಿಟ್ಟು ಆಪಾದನೆಯಿಂದ ಮುಕ್ತಗೊಳಿಸಲು ತೀರ್ಮಾನಿಸಿದೆ.

ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರನ್ನು ಹೊರತುಪಡಿಸಿ ಉಳಿದ ಅಧಿಕಾರಿ / ನೌಕರರು ನೀಡಿರುವ ಸಮಜಾಯಿಷಿಯನ್ನು ಸಮರ್ಥನೆ ಮಾಡುವಂಥ ಕಾರಣಗಳು ಮತ್ತು ದಾಖಲಾತಿಗಳು ಇಲ್ಲದಿರುವುದರಿಂದ, ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಸದರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಡಿಇ 2005, ಬೆಂಗಳೂರು, ದಿನಾಂಕ 9ನೇ ಮಾರ್ಚ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೂಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂಬರ್ 40ರ ಸರ್ಕಾರಿ ಭೂಮಿಯಲ್ಲಿ 12.00 ಎಕರೆ ವಿಸ್ತೀರ್ಣವನ್ನು ಅಕ್ರಮವಾಗಿ ಮಂಜೂರು ಮಾಡಿರುವ ಆಪಾದನೆಗೆ ಸಂಬಂಧಿಸಿದಂತೆ, ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಇವರನ್ನು ಇವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಿ ಉದ್ದೇಶಿತ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ಈ ಪ್ರಕರಣದಲ್ಲಿ ಆರೋಪಿತರಾಗಿರುವ ಕೆಳಕಂಡ ಅಧಿಕಾರಿ / ನೌಕರರ ವಿರುದ್ಧ ಇಲಾಖಾ ವಿಚಾರಣೆ ಮಾಡಿ ಸತ್ಯಾಸತ್ಯತೆಯನ್ನು ತಿಳಿಯುವುದು ಸೂಕ್ತ ಎಂದು ತೀರ್ಮಾನಿಸಿ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 214(2) (ಎ)ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1171, ಹೆಚ್.ಐ.ಜಿ., 10ನೇ 'ಬಿ' ಕ್ರಾಸ್, ಯಲಹಂಕ ನ್ಯೂಟೌನ್, ಬೆಂಗಳೂರು–61 ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

1) ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, (ಪ್ರಸ್ತುತ ನಿವೃತ್ತರು).
2) ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ರಾಮಚಂದ್ರಪುರ ವೃತ್ತ, ಬೆಂಗಳೂರು ಉತ್ತರ ತಾಲ್ಲೂಕು (ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ)
3) ಶ್ರೀ ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ.

4) ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ಆನೇಕಲ್ (ಹಿಂದಿನ ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ವೃತ್ತ).
5) ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ಬೆಂಗಳೂರು ಉತ್ತರ ತಾಲ್ಲೂಕು, ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ನಗರ ಜಿಲ್ಲಾಧಿಕಾರಿ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಪ್ರಕರಣದ ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ. ಸಿಆಸುಇ 16 ಸೇಇವಿ 2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಸರ್ಕಾರಿ ಆದೇಶ ಸಂ. ಸಿಆಸುಇ 45 ಸೇಇವಿ 2001, ದಿನಾಂಕ 4–3–2002ರನ್ವಯ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಪಾವತಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (CCA) ನಿಯಮಾವಳಿ ನಿಯಮ 11 ಮತ್ತು 11ಎರಲ್ಲಿನ ವಿಧಿವಿಧಾನಗಳನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಪಿ.ಆರ್. 464 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ರಾಜ್ಯದ ಭೂ ಮಾಲೀಕರಿಗೆ 2006–07ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ ಸರ್ಕಾರದ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 51 ಎಲ್ಆರ್ಎಂ 2006, ದಿನಾಂಕ 20–12–2006
**2)** ಪ್ರಾದೇಶಿಕ ಆಯುಕ್ತರು, ಬೆಳಗಾವಿ ಅವರ ಪತ್ರ ಸಂಖ್ಯೆ: ಎಲ್ಆರ್ಎಂ ವಿ.ವ. 8/06–07, ದಿನಾಂಕ 20/22–12–2006.

**ಪ್ರಸ್ತಾವನೆ:**

ಕರ್ನಾಟಕ ಭೂ ಸುಧಾರಣೆ 1961ರ ಅಡಿಯಲ್ಲಿ ಭೂಮಿ ಕಳೆದುಕೊಂಡ ಮಾಜಿ ಭೂ ಮಾಲೀಕರಿಗೆ ಪರಿಹಾರವನ್ನು ಪಾವತಿಸಲು 2006–07ನೇ ಸಾಲಿಗೆ ಲೆಕ್ಕ ಶೀರ್ಷಿಕೆ 4515–00–103–1–01–100 (ಯೋಜನೇತರ) ಅಡಿಯಲ್ಲಿ ರೂ.1,20,00,000/– ಗಳ ಅನುದಾನವನ್ನು ಒದಗಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂ. ಕಂಇ 51 ಎಲ್ಆರ್ಎಂ 2006, ದಿನಾಂಕ 20–12–2006 ರಾಜ್ಯದ 8 ಜಿಲ್ಲೆಗಳಿಗೆ ರೂ. 93,97,185/– ಬಿಡುಗಡೆ ಮಾಡಲಾಗಿದೆ.

ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 22–12–2006ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾವಿ, ಇವರು ಈ ಕೆಳಕಂಡ ಜಿಲ್ಲೆಗಳಿಗೆ ಮಾಜಿ ಭೂ ಮಾಲೀಕರಿಗೆ ಪರಿಹಾರ ಹಣ ನೀಡುವ ಜಿಲ್ಲೆಗಳ ಹೆಸರಿನ ಮುಂದೆ ತೋರಿಸಿರುವಂತೆ ಅನುದಾನದ ಅವಶ್ಯಕತೆ ಇದೆಯೆಂದು ವರದಿ ಮಾಡಿರುತ್ತಾರೆ.

| | | | |
|---|---|---|---|
| 1) | ಬಾಗಲಕೋಟೆ | – | ರೂ. 11.12 ಲಕ್ಷಗಳು |
| 2) | ಧಾರವಾಡ | – | ರೂ. 21.00 ಲಕ್ಷಗಳು |
| 3) | ಹಾವೇರಿ | – | ರೂ. 103.91 ಲಕ್ಷಗಳು |
| 4) | ಉತ್ತರ ಕನ್ನಡ | – | ರೂ. 22.95 ಲಕ್ಷಗಳು |
| | **ಒಟ್ಟು** | – | **ರೂ. 158.98 ಲಕ್ಷಗಳು** |

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಅನುದಾನವನ್ನು ಬಿಡುಗಡೆ ಮಾಡಬೇಕಾದ ಅವಶ್ಯಕತೆಯನ್ನು ಮನಗಂಡು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 51 ಎಲ್ಆರ್ಎಂ 2006, ಬೆಂಗಳೂರು, ದಿನಾಂಕ 6ನೇ ಫೆಬ್ರವರಿ, 2007**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಅಡಿಯಲ್ಲಿ ಭೂಮಿಯನ್ನು ಕಳೆದುಕೊಂಡ ಮಾಜಿ ಭೂ ಮಾಲೀಕರಿಗೆ ಪರಿಹಾರವನ್ನು ಪಾವತಿಸಲು ಈ ಕೆಳಕಂಡ ಜಿಲ್ಲೆಗಳ ಹೆಸರಿನ ಎದುರಿಗೆ ಸೂಚಿಸಿರುವ ಮೊತ್ತವನ್ನು ಬಿಡುಗಡೆ ಮಾಡಲಾಗಿದೆ.

| ಕ್ರ. ಸಂ. | ಜಿಲ್ಲೆಗಳ ಹೆಸರು | ಮಂಜೂರು ಮಾಡಲಾದ ಅನುದಾನ (ರೂ.ಗಳಲ್ಲಿ) |
|---|---|---|
| 1 | ಬಾಗಲಕೋಟೆ | 3,00,000/– |
| 2 | ಧಾರವಾಡ | 5,00,000/– |
| 3 | ಹಾವೇರಿ | 13,02,815/– |
| 4 | ಉತ್ತರ ಕನ್ನಡ | 5,00,000/– |
| | **ಒಟ್ಟು ರೂ:–** | **26,02,815/–** |

(ರೂ. ಇಪ್ಪತ್ತಾರು ಲಕ್ಷದ ಎರಡು ಸಾವಿರದ ಎಂಟು ನೂರ ಹದಿನೈದು ರೂಪಾಯಿಗಳು ಮಾತ್ರ)

ಈ ವೆಚ್ಚವನ್ನು 2006–07ನೇ ಸಾಲಿನಲ್ಲಿ ಒದಗಿಸಲಾದ ಲೆಕ್ಕ ಶೀರ್ಷಿಕೆ 4515–00–103–1–01–100 (ಯೋಜನೇತರ) ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶದಲ್ಲಿ ಮಂಜೂರಾದ ಅನುದಾನವನ್ನು ಉಪಯೋಗಿಸಿದ ಬಗ್ಗೆ ಬಳಕೆ ಪ್ರಮಾಣ ಪತ್ರ (Utilisation Certificate)ವನ್ನು ನಿಗದಿತ ನಮೂನೆಯಲ್ಲಿ ಸಂಬಂಧಿತ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2003, ದಿನಾಂಕ 12–6–2003ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 346 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆಳಗಾಂವ್ ಜಿಲ್ಲೆ ಅಥಣಿ ಉಪ ನೋಂದಣಿ ಕಚೇರಿ ಕಟ್ಟಡ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜಿಲ್ಲಾ ನೋಂದಣಿ ಮತ್ತು ಉಪ ನೋಂದಣಿ ಕಛೇರಿಯ ಕಟ್ಟಡ ಕಟ್ಟುವ ಕುರಿತು 2006–07ನೇ ಸಾಲಿನಲ್ಲಿ ರೂ. 200–00 ಲಕ್ಷ ಅನುದಾನವನ್ನು ಆಯವ್ಯಯದಲ್ಲಿ ಒದಗಿಸಲಾಗಿದೆ. ಸದರಿ ಮೊತ್ತದಲ್ಲಿ ಈಗಾಗಲೇ ತುಮಕೂರು, ಚಿತ್ರದುರ್ಗ, ಹಾಸನ, ತಿಪಟೂರು, ಕುರುಗೋಡು ಹಾಗೂ ಮಂಗಳೂರು ನಗರ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿ ಈಗಾಗಲೇ ಜಿಲ್ಲಾ ನೋಂದಣಿ / ಉಪ ನೋಂದಣಿ ಕಛೇರಿ ಕಟ್ಟಡ ಕಟ್ಟಲು ಆಯವ್ಯಯದಲ್ಲಿನ ಮೊತ್ತವನ್ನು ಬಿಡುಗಡೆ ಮಾಡಲಾಗಿದ್ದು, ಸದರಿ ಮೊತ್ತದಲ್ಲಿ ಈಗಾಗಲೇ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿರುವ ಕಟ್ಟಡಗಳಿಗೆ ಅನುದಾನ ಮಂಜೂರು ಮಾಡಿ ಆದೇಶಿಸಿದೆ. ಪ್ರಸಕ್ತ ಸಾಲಿನಲ್ಲಿ ಬೆಳಗಾಂವ್ ಜಿಲ್ಲೆಯ ಅಥಣಿ ಉಪ ನೋಂದಣಿ ಕಛೇರಿ ಕಟ್ಟಡ ಕಟ್ಟಲು ಬೇಕಿರುವ ರೂ. 10.40 ಲಕ್ಷಗಳ ಪೈಕಿ ರೂ. 5.20 ಲಕ್ಷಗಳ ಮೊತ್ತವನ್ನು ಬಿಡುಗಡೆಗೊಳಿಸಲು ಹಾಗೂ ಆಡಳಿತಾತ್ಮಕ ಮಂಜೂರಾತಿ ನೀಡಲು ಉದ್ದೇಶಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006, ಬೆಂಗಳೂರು, ದಿನಾಂಕ 14ನೇ ಫೆಬ್ರವರಿ, 2007**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನದಲ್ಲಿ ಬೆಳಗಾಂವ್ ಜಿಲ್ಲೆಯ ಅಥಣಿ ತಾಲ್ಲೂಕಿನಲ್ಲಿ ರೂ. 10.40 ಲಕ್ಷ ಮೊತ್ತದಲ್ಲಿ ಉಪ ನೋಂದಣಿ ಕಛೇರಿ ಕಟ್ಟಡ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

2) ಸದರಿ ಕಟ್ಟಡವನ್ನು ಕರ್ನಾಟಕ ಗೃಹ ಮಂಡಳಿಯ ಮುಖಾಂತರ ನಿರ್ಮಿಸಲು ಉದ್ದೇಶಿಸಿರುವುದರಿಂದ, ಪ್ರಸ್ತುತ ಆಯವ್ಯಯದಲ್ಲಿ ಲಭ್ಯವಿರುವ ರೂ. 5.20 ಲಕ್ಷಗಳ ಮೊತ್ತವನ್ನು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರ ಖಾತೆಗೆ ಬಿಡುಗಡೆಗೊಳಿಸಲು ಆದೇಶಿಸಿದೆ.

3) ಪ್ರಸ್ತುತ ಕಟ್ಟಡದ ನಿರ್ಮಾಣಕ್ಕೆ ತಗಲಲಿರುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 4059–80–051–0–30–386 ರಡಿಯಲ್ಲಿ ಭರಿಸತಕ್ಕದ್ದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಫ್. ಯರಗೊಪ್ಪ**

ಪಿ.ಆರ್. 443 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಕಂಪ್ಯೂಟರ್ ಹಾಗೂ ಸಂಬಂಧಿತ ಉಪಕರಣಗಳನ್ನು ಖರೀದಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 64 ಮುನೋಸ 2002, ದಿನಾಂಕ 31–1–2007

2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: Comp/14/2006-07, ದಿನಾಂಕ 9–2–2007.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 64 ಮುನೋಸ 2002, ಬೆಂಗಳೂರು, ದಿನಾಂಕ 9ನೇ ಫೆಬ್ರವರಿ, 2007**

ಮೇಲೆ ಓದಲಾದ (1) ದಿನಾಂಕ 31–1–2007ರ ಸರ್ಕಾರದ ಆದೇಶದಲ್ಲಿ ಕಂಪ್ಯೂಟರ್ ಮತ್ತು ತತ್ಸಂಬಂಧಿತ ಉಪಕರಣಗಳನ್ನು ಪ್ರತಿಷ್ಠಿತ ಕಂಪನಿಗಳಿಂದ ದರಪಟ್ಟಿ ಪಡೆದು ಖರೀದಿಸಲು ಆದೇಶಿಸಲಾಗಿತ್ತು. ಈ ಆದೇಶವನ್ನು ಭಾಗಶಃ

ಮಾರ್ಪಡಿಸಿ, ಈ ಕೆಳಕಂಡ ವಿಧಾನದಿಂದ ಖರೀದಿಸಲು ಆದೇಶಿಸಿದೆ. ಇನ್ನುಳಿದಂತೆ ಯಾವುದೇ ರೀತಿಯ ಬದಲಾವಣೆಗಳಿರುವುದಿಲ್ಲ.

1) ದಿನಾಂಕ 9–1–2007ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ವಿಮಳ 2005ರಲ್ಲಿ ಆದೇಶಿಸಿರುವಂತೆ ಅಥವಾ Directorate General of Supplies and Disposals ದರಪಟ್ಟಿಯ ಪ್ರಕಾರ ಕಂಪ್ಯೂಟರ್ ಮತ್ತು ತತ್ಸಂಬಂಧಿತ ಉಪಕರಣಗಳನ್ನು ಖರೀದಿಸುವುದು.

2) ಕಂಪ್ಯೂಟರ್ ಟೇಬಲ್ ಮತ್ತು ಕುರ್ಚಿಗಳನ್ನು ಅಧಿಕೃತ ಮಾರಾಟಗಾರರಿಂದ ದರಪಟ್ಟಿ ಪಡೆದು, ಕಡಿಮೆ ದರ ಸೂಚಿಸಿರುವ ಮಾರಾಟಗಾರರಿಂದ ಖರೀದಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಫ್. ಯರಗೊಪ್ಪ**

ಪಿ.ಆರ್. 441 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡವನ್ನು ರೂ. 10.40 ಲಕ್ಷಗಳಲ್ಲಿ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡಿರುವ ಕುರಿತು.

**ಓದಲಾಗಿದೆ:** 1) ದಿನಾಂಕ 29–3–2006ರ ಸರ್ಕಾರದ ಆದೇಶ ಸಂಖ್ಯೆ: ಕಂಇ 88 ಮುನೋಮು 2006

2) ದಿನಾಂಕ 25–5–2006ರ ಸರ್ಕಾರದ ಆದೇಶ ಸಂಖ್ಯೆ: ಕಂಇ 88 ಮುನೋಮು 2006

3) ದಿನಾಂಕ 6–9–2006ರ ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ 29–3–2006ರ ಸರ್ಕಾರಿ ಆದೇಶದಲ್ಲಿ ಬೆಳಗಾಂವ್ ಜಿಲ್ಲೆಯ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕೆ ರೂ. 10.40 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿ ಹಣ ಬಿಡುಗಡೆ ಮಾಡಿ ಆದೇಶಿಸಲಾಗಿದೆ. ಸದರಿ ಅನುದಾನವನ್ನು 2005–06ನೇ ಸಾಲಿನಲ್ಲಿ ಉಪಯೋಗಿಸಿ ಕೊಂಡಿರುವುದಿಲ್ಲ.

ಮೇಲೆ ಓದಲಾಗಿರುವ (2) ದಿನಾಂಕ 25–5–2006ರ ಸರ್ಕಾರದ ಆದೇಶದಲ್ಲಿ ದಿನಾಂಕ 29–3–2006ರ ಆದೇಶವನ್ನು 2006–07ನೇ ಸಾಲಿಗೆ ನವೀಕರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾಗಿರುವ (3)ರ ದಿನಾಂಕ 6–9–2006ರ ಸರ್ಕಾರದ ಆದೇಶದಲ್ಲಿ 2006–07ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4059–80–051–0–30–386 ರಡಿಯಲ್ಲಿ ಉಪ ನೋಂದಣಿ / ಜಿಲ್ಲಾ ನೋಂದಣಿ ಕಛೇರಿ ಕಟ್ಟಡ ಕಟ್ಟುವ ಸಲುವಾಗಿ (2006–07ನೇ ಸಾಲಿನಲ್ಲಿ) ಒದಗಿಸಲಾದ ರೂ. 200.00 ಲಕ್ಷಗಳಲ್ಲಿ ತುಮಕೂರು ಮತ್ತು ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕೆ ರೂ. 75.18 ಲಕ್ಷ, ಇನ್ನುಳಿದ ಮೊತ್ತವನ್ನು ಚಿತ್ರದುರ್ಗ, ಹಾಸನ, ಬಾಣಾವರ, ತಿಪಟೂರು, ಕುರುಗೋಡು ಮತ್ತು ಮಂಗಳೂರು ನಗರ ಹಾಗೂ ತಾಲ್ಲೂಕು ಕಛೇರಿಗಳಿಗಾಗಿ ಉಪಯೋಗಿಸಿಕೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ.

ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಜಿಲ್ಲಾ / ಉಪ ನೋಂದಣಿ ಕಛೇರಿ ಕಟ್ಟಡ ಕಟ್ಟಲು ಒದಗಿಸಲಾದ ಅನುದಾನದಲ್ಲಿ ಸಾಕಷ್ಟು ಹಣದ ಲಭ್ಯತೆ ಇರದಿರುವುದರಿಂದ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006, ಬೆಂಗಳೂರು, ದಿನಾಂಕ 14ನೇ ಫೆಬ್ರವರಿ, 2007**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನದಲ್ಲಿ ಬರುವ ಬೆಳಗಾಂವ್ ಜಿಲ್ಲೆಯ ಸದಲಗಾ ಪಟ್ಟಣದಲ್ಲಿ ರೂ.10.40 ಲಕ್ಷ ಮೊತ್ತದಲ್ಲಿ ಉಪ ನೋಂದಣಿ ಕಛೇರಿ ಕಟ್ಟಡ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡುವುದರೊಂದಿಗೆ ದಿನಾಂಕ 6–9–2006ರ ಆದೇಶದಲ್ಲಿ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡಲಾಗಿದೆ ಎನ್ನಲಾದ ಆದೇಶವನ್ನು ಮಾರ್ಪಡಿಸಿ ರೂ. 5.20 ಲಕ್ಷ ಮೊತ್ತವನ್ನು ಪ್ರಸಕ್ತ ಸಾಲಿನಲ್ಲಿ ಬಿಡುಗಡೆಗೊಳಿಸಿ ಆದೇಶಿಸಿದೆ.

2) ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 4059–80–051–0–30–386 (ಯೋಜನೆ) 2006–07ರಡಿ ಭರಿಸತಕ್ಕದ್ದು.

3) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಫ್. ಯರಗೊಪ್ಪ**

ಪಿ.ಆರ್. 442 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** 2007–08ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2030–03–001–2–04 ನೋಂದಾಯಿಸಿದ ಪತ್ರಗಳ ಪೂರೈಕೆಯ ವೆಚ್ಚ 051 ಸಾಮಾನ್ಯ ವೆಚ್ಚಗಳ ಬಾಬ್ತಿಗೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಯುಡಿ/16/2006–07, ದಿನಾಂಕ 5–5–2007.

**ಪ್ರಸ್ತಾವನೆ:**

2007–08ನೇ ಸಾಲಿನ ಆಯವ್ಯಯ ಸಲ್ಲಿಸುವಾಗ ಆಯವ್ಯಯ ವೆಚ್ಚದಡಿ ಲೆಕ್ಕ ಶೀರ್ಷಿಕೆ 2030–03–001–2–04 ನೋಂದಾಯಿಸಿದ ಪತ್ರಗಳ ಪೂರೈಕೆಯ ವೆಚ್ಚ 051 ಸಾಮಾನ್ಯ ವೆಚ್ಚಗಳ ಬಾಬ್ತು ಅಡಿ ರೂ. 4,000/– ಲಕ್ಷ ಮೊತ್ತ ಒದಗಿಸುವಂತೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆದರೆ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ 1, ಪುಟ 64ರಲ್ಲಿ ಪ್ರಸ್ತುತ ಲೆಕ್ಕ ಶೀರ್ಷಿಕೆಗೆ ಅನುದಾನ ಒದಗಿಸಿರುವುದಿಲ್ಲ. ಇದರಿಂದಾಗಿ, ಗಣಕೀಕರಣ ನಿರ್ವಹಣೆ ಮಾಡುತ್ತಿರುವ service provider ಆಗಿ ಮೆ: ಸಿಎಂಎಸ್ ಕಂಪನಿ ಪ್ರೈವೇಟ್ ಲಿಮಿಟೆಡ್ ಹಾಗೂ ಮೆ: ಇಸಿಐಎಲ್ ಸಂಸ್ಥೆಗಳಿಗೆ ಸ್ಕ್ಯಾನ್ ಮಾಡಲಾದ ಪ್ರತಿ ಪುಟಕ್ಕೆ ಒಪ್ಪಂದದಂತೆ ಪ್ರತಿ ತಿಂಗಳು ಸೇವಾ ಶುಲ್ಕ ಪಾವತಿಸಬೇಕಾಗುತ್ತದೆ. ಇದರಿಂದಾಗಿ, ನೋಂದಣಿ ಪ್ರಕ್ರಿಯೆಯಲ್ಲಿ ಅಡಚಣೆ ಉಂಟಾಗದಂತೆ ಕ್ರಮ ವಹಿಸಲು ಅನುದಾನ ಬಿಡುಗಡೆ ಅಗತ್ಯವಿರುವುದಾಗಿ ಮೇಲೆ ಓದಲಾಗಿರುವ ದಿನಾಂಕ 5–5–2007ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಕೋರಿರುತ್ತಾರೆ. ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 181 ಮುನೋಮು 2007, ಬೆಂಗಳೂರು, ದಿನಾಂಕ 8ನೇ ಜೂನ್, 2007**

2007–08ನೇ ಸಾಲಿನಲ್ಲಿ service provider ಗಳಿಗೆ ನಿಯತಕಾಲಿಕವಾಗಿ ಅವರು ಪೂರೈಸಿದ ಕೆಲಸಕ್ಕೆ ಒಡಂಬಡಿಕೆಯಂತೆ ಹಣ ಪಾವತಿಸಲು ಹಾಗೂ ಕಾವೇರಿಯ ಇನ್ನಿತರೆ ಯಾವುದೇ ಗಣಕೀಕರಣಕ್ಕೆ ಸಂಬಂಧಪಟ್ಟಂತೆ ಹಣ ಪಾವತಿಸಲು 2030–03–001–2–04–051 ಸಾಮಾನ್ಯ ವೆಚ್ಚಗಳು (ಯೋಜನೇತರ) ಲೆಕ್ಕ ಶೀರ್ಷಿಕೆಗೆ ರೂ. 900.00 ಲಕ್ಷಗಳನ್ನು (ಒಂಭೈನೂರು ಲಕ್ಷ ರೂಪಾಯಿಗಳು) ಸಾದಿಲ್ವಾರು ನಿಧಿಯಿಂದ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಅನುದಾನ ಬಿಡುಗಡೆಗೊಳಿಸಿ ಆದೇಶಿಸಿದೆ.

"ಈ ರೀತಿ ಬಿಡುಗಡೆ ಮಾಡುವ ಮೊತ್ತವನ್ನು ಸಾಧಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ 8000–00–209–0–00 ಮುದ್ರಾಂಕ ಮತ್ತು ನೋಂದಣಿ ಇದರಲ್ಲಿ ಖರ್ಚು ಹಾಕಿ ನಂತರ ಸಂಚಿತ ನಿಧಿ ಲೆಕ್ಕ ಶೀರ್ಷಿಕೆ 2030–03–001–2–04–051 (ಯೋಜನೇತರ) ಇದರಲ್ಲಿ ಪೂರಕ ಅಂದಾಜುಗಳ ಮೂಲಕ ನಿಧಿಗೆ ಈ ಮೊತ್ತವನ್ನು ಮರು ತುಂಬಲಾಗುವುದು ಆರ್ಥಿಕ ಇಲಾಖೆಯು ಸಾಧಿಲ್ವಾರು ನಿಧಿಯಿಂದ ಈ ಮೊತ್ತವನ್ನು ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಆರ್ಥಿಕ ಇಲಾಖೆಯ ಪ್ರತ್ಯೇಕ ಆದೇಶವಿಲ್ಲದೆ ಹಣವನ್ನು ಬಿಡುಗಡೆ ಮಾಡುವಂತಿಲ್ಲ"

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 580 ವೆಚ್ಚ–7/07, ದಿನಾಂಕ 1–6–2007ರಲ್ಲಿನ ಅಭಿಪ್ರಾಯದ ಮೇರೆಗೆ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1092

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನದಲ್ಲಿರುವ ಕೇಂದ್ರಿಯ ಅಭಿಲೇಖಾಲಯ ಮುಚ್ಚುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂಇ 64 ಮುನೋಸೇ 2002, ದಿನಾಂಕ 17–8–2002.
2) ಸರ್ಕಾರಿ ಆದೇಶ ಸಂಖ್ಯೆ: ಕಂಇ 349 ಮುನೋಮು 2002, ದಿನಾಂಕ 28–4–2003
3) ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಮುನೋಸೇ (1) 2003, ದಿನಾಂಕ 3–11–2003
4) ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಮುನೋಸೇ (1) 2003, ದಿನಾಂಕ 26–3–2004
5) ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಜಿನೋ/ ಸಿಬ್ಬಂದಿ–53/2006–07, ದಿನಾಂಕ 9–4–2007.
6) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಬ್ಬಂದಿ–2–123/2003–04, ದಿನಾಂಕ 10–4–2007.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ 17–8–2002ರ ಸರ್ಕಾರಿ ಆದೇಶದಲ್ಲಿ ಜಿಲ್ಲಾ ಮಟ್ಟದಲ್ಲಿ ಮತ್ತು ಕೇಂದ್ರ ಸ್ಥಳಗಳಲ್ಲಿ ಅತ್ಯಾಧುನಿಕ ಉಪಕರಣಗಳಾದ ಡಿಜಿಟಲ್ ದಾಖಲೆಗಳನ್ನು ಮತ್ತು ಮೈಕ್ರೋ ಫಿಲಂಗಳನ್ನು ಅಳವಡಿಸಿದ ಕೇಂದ್ರ ಅಭಿಲೇಖಾಲಯವನ್ನು ತೆರೆಯಲು ಪ್ರಸ್ತಾಪಿಸಲಾಗಿದೆ.

ಮೇಲೆ ಓದಲಾಗಿರುವ (2) ದಿನಾಂಕ 28–4–2003ರ ಸರ್ಕಾರದ ಆದೇಶದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನದಲ್ಲಿ, ಸಾರ್ವಜನಿಕರಿಗೆ ಸ್ಥಿರಾಸ್ತಿ ನೋಂದಣಿಗೆ ಸಂಬಂಧಿಸಿದಂತೆ, ಬೇಕಿರುವ ದಾಖಲೆಗಳು ಒಂದೇ ಸ್ಥಳದಲ್ಲಿ ಲಭ್ಯವಾಗಲಿ ಎಂಬ ಉದ್ದೇಶದಿಂದಾಗಿ ಕೇಂದ್ರ ಅಭಿಲೇಖಾಲಯವನ್ನು ಸ್ಥಾಪಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿತ್ತು.

ಮೇಲೆ ಓದಲಾಗಿರುವ (3) ದಿನಾಂಕ 3–11–2003ರ ಸರ್ಕಾರದ ಆದೇಶದಲ್ಲಿ ಕೇಂದ್ರ ಅಭಿಲೇಖಾಲಯಕ್ಕೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕೆಲವು ಅಧಿಕಾರಿ / ನೌಕರ ಸಿಬ್ಬಂದಿಯನ್ನು ವಿವಿಧ ಕಛೇರಿಗಳಿಂದ ಸ್ಥಳಾಂತರಿಸಲು ಅನುಮೋದನೆ ನೀಡಿ ಆದೇಶಿಸಲಾಗಿತ್ತು.

ಮೇಲೆ ಓದಲಾಗಿರುವ (4) ದಿನಾಂಕ 26-3-2004ರ ಸರ್ಕಾರದ ಆದೇಶದಲ್ಲಿ ವಿವಿಧ ಕಛೇರಿಗಳಿಂದ ಸ್ಥಳಾಂತರಿಸಲ್ಪಟ್ಟ ಕ್ರಮದಿಂದಾಗಿ ಕೆಲವೊಂದು ಕಛೇರಿಗಳಲ್ಲಿ ಸಿಬ್ಬಂದಿಯ ಕೊರತೆಯನ್ನು ಪರಿಗಣಿಸಿ, ಎಲ್ಲ ಕಛೇರಿಗಳಲ್ಲಿನ ಕರ್ತವ್ಯ ಭಾರವನ್ನು ಮರುಪರಿಶೀಲಿಸಿ, ಮರುವಿನ್ಯಾಸ (ರಿಡಿಪ್ಲಾಯ್‌ಮೆಂಟ್) ಆಧಾರದ ಮೇಲೆ ಸಿಬ್ಬಂದಿಯನ್ನು ಒದಗಿಸಲಾಗಿತ್ತು.

ಮೇಲೆ ಓದಲಾಗಿರುವ (5) ದಿನಾಂಕ 9–4–2007ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಕೇಂದ್ರ ಅಭಿಲೇಖಾಲಯದಲ್ಲಿನ ಶಾಶ್ವತ ದಾಖಲೆಗಳನ್ನು ಸುರಕ್ಷಿತವಾಗಿ ರಕ್ಷಿಸುವ ಹಿತದೃಷ್ಟಿಯಿಂದ, ಅವುಗಳನ್ನು ವಿವಿಧ ಕಛೇರಿಗಳಿಗೆ ಸ್ಥಳಾಂತರಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮೇಲೆ ಓದಲಾಗಿರುವ (6)ರ ದಿನಾಂಕ 10–4–2007ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು, ಜಿಲ್ಲಾ ನೋಂದಣಾಧಿಕಾರಿಗಳು ನೀಡಿರುವ ಅಭಿಪ್ರಾಯದ ಮೇರೆಗೆ ಕೇಂದ್ರ ಅಭಿಲೇಖಾಲಯಕ್ಕೆ ಖುದ್ದಾಗಿ ಭೇಟಿ ನೀಡಿ ವಾಸ್ತವಾಂಶ ಪರೀಕ್ಷಿಸಿ, ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ನೀಡಿರುವ ಅಭಿಪ್ರಾಯವನ್ನು ಪುಷ್ಟೀಕರಿಸುವ ಮೂಲಕ ಕೇಂದ್ರ ಅಭಿಲೇಖಾಲಯದಲ್ಲಿರುವ ದಾಖಲೆಗಳನ್ನು ಸುರಕ್ಷಿತವಾಗಿರಿಸಲು, ಸಂಬಂಧಪಟ್ಟ ಉಪ ನೋಂದಣಿ ಕಛೇರಿಗಳಿಗೆ ಸ್ಥಳಾಂತರಿಸಲು ಹಾಗೂ ಅಲ್ಲಿನ ಸಿಬ್ಬಂದಿಯನ್ನು ಅಗತ್ಯವಿರುವ ಕಡೆ ಮರು ವಿನ್ಯಾಸ (Redeployment) ಮಾಡುವ ಮೂಲಕ ಸದರಿ ಕಛೇರಿಯನ್ನು ಮುಚ್ಚುವುದು ಸೂಕ್ತವೆಂದು ಅಭಿಪ್ರಾಯ ನೀಡುವ ಮೂಲಕ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 8 ಮುನೋಸ 2007, ಬೆಂಗಳೂರು, ದಿನಾಂಕ 25ನೇ ಮೇ, 2007**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಕೇಂದ್ರ ಅಭಿಲೇಖಾಲಯವನ್ನು ಈ ಕೆಳಕಂಡ ಷರತ್ತು ಹಾಗೂ ನಿಬಂಧನೆಗೊಳಪಟ್ಟು ಮುಚ್ಚಲು ಸರ್ಕಾರವು ಅನುಮೋದನೆ ನೀಡಿದೆ.

1) ಕೇಂದ್ರ ಅಭಿಲೇಖಾಲಯದಲ್ಲಿನ ದಾಖಲೆಗಳನ್ನು ಮೂಲ ಕಛೇರಿಗಳಿಗೆ ಸ್ಥಳಾಂತರಿಸುವುದು.

2) ಕೇಂದ್ರ ಅಭಿಲೇಖಾಲಯದಲ್ಲಿನ ಮಂಜೂರಾದ ಒಟ್ಟು 83 ಹುದ್ದೆಗಳ ಪೈಕಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗವನ್ನು ದಾಖಲೆ ಸಮೇತ ಸ್ಥಳಾಂತರಿಸಲು ಹಾಗೂ ಇನ್ನುಳಿದ 49 ಹುದ್ದೆಗಳನ್ನು ಹೊಸದಾಗಿ ಮಂಜೂರು ಮಾಡಲಾಗುವ ಉಪ ನೋಂದಣಿ ಕಛೇರಿಗಳಿಗೆ ಒದಗಿಸಲು ಮತ್ತು ದಾಖಲೆಗಳ ಸಂರಕ್ಷಣೆಯ ಬಗ್ಗೆ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು 2 ತಿಂಗಳೊಳಗಾಗಿ ಕಾರ್ಯ ಯೋಜನೆಯೊಂದನ್ನು ರೂಪಿಸಿ ಸರ್ಕಾರದ ಅನುಮೋದನೆ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1000

**ವಿಷಯ:** ಜಿಲ್ಲಾ ಪುನರ್ ವಿಂಗಡಣಾ ಸಮಿತಿಯ ಅಧ್ಯಕ್ಷರು ಹಾಗೂ ಇಬ್ಬರು ಸದಸ್ಯರುಗಳಿಗೆ ಸಂಭಾವನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ಕಂಇ 27 ಭೂದಾಪು 2006, ದಿನಾಂಕ 21–2–2007

**2)** ಸರ್ಕಾರದ ಆದೇಶ ಸಂ. ಎಫ್‌ಡಿ 98 ಬಿಆರ್‌ಎಸ್ 2007, ದಿನಾಂಕ 12–3–2007 (ಆರ್ಥಿಕ ಇಲಾಖೆಯ ಆದೇಶ)

**3)** ಮಾನ್ಯ ಅಧ್ಯಕ್ಷರು, ಜಿಲ್ಲಾ ಪುನರ್ ವಿಂಗಡಣಾ ಸಮಿತಿ, ಇವರ ಪತ್ರ ಸಂ. ಡಿಆರ್‌ಸಿ 10/2007–08, ದಿನಾಂಕ 22–3–2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 21–2–2007ರನ್ವಯ ರಾಜ್ಯದಲ್ಲಿ ಜಿಲ್ಲೆಗಳ ಪುನರ್ ವಿಂಗಡಣೆ ಹಾಗೂ ಹೊಸ ಜಿಲ್ಲೆಗಳ ರಚನೆ ಸಂಬಂಧ ಪರಿಶೀಲಿಸಲು ಸರ್ಕಾರವು ಒಬ್ಬ ಅಧ್ಯಕ್ಷರನ್ನು ಹೊಂದಿದ ಒಟ್ಟು 4 ಜನರಿರುವ (ಸದಸ್ಯರಿರುವ) ಜಿಲ್ಲಾ ಪುನರ್ ವಿಂಗಡಣಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 12–3–2007ರ ಆದೇಶದನ್ವಯ ಸದರಿ ಸಮಿತಿಯ ವೆಚ್ಚಕ್ಕಾಗಿ ರೂ. 10.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಜಿಲ್ಲಾ ಪುನರ್ ವಿಂಗಡಣಾ ಸಮಿತಿ ಇವರು ಪ್ರಸ್ತುತ ರಚಿಸಲಾಗಿರುವ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ, ಈ ಕಾರ್ಯಕ್ಕಾಗಿ ಒಟ್ಟಾರೆ (Lumpsum) ಗೌರವಧನವನ್ನು ನಿಗದಿಪಡಿಸಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 27 ಭೂದಾಪು 2006, ಬೆಂಗಳೂರು, ದಿನಾಂಕ 5ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಿಲ್ಲಾ ಪುನರ್ ವಿಂಗಡಣಾ ಕಾರ್ಯಕ್ಕಾಗಿ ನೇಮಕಗೊಂಡಿರುವ ಸಮಿತಿಯ ಅಧ್ಯಕ್ಷರಿಗೆ 5 ತಿಂಗಳ ಅವಧಿಗೆ ಒಟ್ಟಾರೆ ರೂ. 1,25,000–00 (ಒಂದು ಲಕ್ಷದ ಇಪ್ಪತ್ತೈದು

ಸಾವಿರ ರೂಪಾಯಿಗಳು ಮಾತ್ರ) ಮತ್ತು ಉಳಿದ ಇಬ್ಬರು ಅಧಿಕಾರೇತರ ಸದಸ್ಯರಿಗೆ ರೂ. 1,20,000–00 (ಒಂದು ಲಕ್ಷದ ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಭಾವನೆಯನ್ನು ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 255 ವೆಚ್ಚ 7/07, ದಿನಾಂಕ 23–5–2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ಪುರುಷೋತ್ತಮ**

ಪಿ.ಆರ್. 1062 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ).

**ವಿಷಯ:** ಶ್ರೀ ಜಿ.ಆರ್. ರೂಗಿ, ಭೂದಾಖಲೆಗಳ ಉಪನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 19 ಭೂದಾಸೇ (1) 2007, ಬೆಂಗಳೂರು, ದಿನಾಂಕ 24ನೇ ಮೇ, 2007**

ಶ್ರೀ ಜಿ.ಆರ್. ರೂಗಿ, ಭೂದಾಖಲೆಗಳ ಉಪನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರ ರವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿಕ್ಕೋಡಿ ಉಪ ವಿಭಾಗ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರು ಆಸ್ತಿಯ ಪಾಲುಗಾರಿಕೆ ಸಂಬಂಧ ಅಥಣಿ ನ್ಯಾಯಾಲಯದಲ್ಲಿ ಅಸಲು ದಾವೆ ಸಂ. 11/03, 108/04 ಪ್ರಕರಣಗಳು ನ್ಯಾಯಾಲಯದಲ್ಲಿ ಇರುವಾಗ ಅಥಣಿ ನಗರದ ನಗರ ಮಾಪನ ವ್ಯಾಪ್ತಿಯ ಸಿಟಿ ಸ.ನಂ. 1040, 2573, 2575, 2577, 2579, 3408ರ ಬಗ್ಗೆ ಕಾನೂನು ಬಾಹಿರವಾಗಿ ಕ್ರಮ ಎಸಗಿ ಕರ್ತವ್ಯ ಲೋಪ ಮತ್ತು ನಡತೆ ನಿಯಮಗಳ ಉಲ್ಲಂಘನೆ ಮಾಡಿರುವುದು ಕಂಡು ಬಂದಿರುವುದರಿಂದಲೂ,

ಈ ಸಂಬಂಧ ಶ್ರೀ ಜಿ.ಆರ್. ರೂಗಿ, ಭೂದಾಖಲೆಗಳ ಉಪನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರರವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಜಿ.ಆರ್. ರೂಗಿ, ಭೂದಾಖಲೆಗಳ ಉಪನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರ ಅವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜಿ.ಆರ್. ರೂಗಿ, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ರ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಈ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಭೂದಾಖಲೆಗಳ ಉಪನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರ ಹುದ್ದೆಯ ಪ್ರಭಾರ ವ್ಯವಸ್ಥೆಯನ್ನು ಮಾಡಲು ಆಯುಕ್ತರು, ಭೂಮಾಪನ ಇಲಾಖೆ ರವರು ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ಪುರುಷೋತ್ತಮ**

ಪಿ.ಆರ್. 998 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ).

**ವಿಷಯ:** ಶ್ರೀ ಮರುಳಸಿದ್ದಪ್ಪ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ – ಇಲಾಖಾ ವಿಚಾರಣೆಯನ್ನು ಕೈ ಬಿಡುವ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಪ್ರಸ್ತಾವನೆ ಸಂ. ಇಎಸ್‌ಟಿ (2)/ಸಿಆರ್/85/99–2000, ದಿನಾಂಕ 14–3–2000

2) ಶ್ರೀ ಪಿ.ಎಂ. ಮರಳಸಿದ್ದಪ್ಪ, ಹಿಂದಿನ ತಹಶೀಲ್ದಾರ್, ಹುಣಸೂರು ಇವರಿಗೆ ಕಾರಣ ಕೇಳುವ ನೋಟೀಸ್ ದಿನಾಂಕ 22–9–2004.

3) ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಎಡಿಇ 2000, ದಿನಾಂಕ 7–10–2004.

4) ಶ್ರೀ ಪಿ.ಎಂ. ಮರಳಸಿದ್ದಪ್ಪ, ಇವರ ಲಿಖಿತ ಸಮಜಾಯಿಷಿ ದಿನಾಂಕ 25–10–2004.

5) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಮೈಸೂರು ಇವರ ವರದಿ ದಿನಾಂಕ 18–8–2005.

**ಪ್ರಸ್ತಾವನೆ:**

ಶ್ರೀ ಪಿ.ಎಂ. ಮರಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್ ಇವರು ಹಿಂದೆ ಹುಣಸೂರು ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 21–12–1999 ರಂದು ನಡೆದ ಜಿಲ್ಲಾ ಮಟ್ಟದ ತಹಶೀಲ್ದಾರರ ಸಭೆಯಲ್ಲಿ ತೀರ್ಮಾನಿಸಿದಂತೆ, ಸಂಬಂಧಪಟ್ಟ ಖಾತೆದಾರರಿಗೆ ಉಚಿತವಾಗಿ ಹಂಚುವ ನಿರ್ದೇಶನವಿದ್ದರೂ ತಾಲ್ಲೂಕಿನಲ್ಲಿ ಒಟ್ಟು 54,262 ಖಾತೆದಾರರಿಗೆ 74,533 ಆರ್.ಟಿ.ಸಿ. ಗಳನ್ನು ನೀಡಬೇಕಾಗಿದ್ದು, ದಿನಾಂಕ 9–1–2000ದ ವರೆಗೆ

ಕೇವಲ 17,258 ಆರ್.ಟಿ.ಸಿ. ಗಳನ್ನು ಮಾತ್ರ ದಿನಾಂಕ 31–12–1999ರ ವರೆಗೆ 8,500, ದಿನಾಂಕ 9–1–2000ರ ವರೆಗೆ 8,758 ಹಂಚಿ, ಆರ್.ಟಿ.ಸಿ. ಹಂಚಿಕೆಯಲ್ಲಿ ತೀವ್ರ ನಿರಾಸಕ್ತಿ ವಹಿಸಿ ಹಾಗೂ ಇನ್ನಿತರೇ 5 ಆರೋಪಗಳಲ್ಲಿ ಕರ್ತವ್ಯ ಲೋಪಗಳನ್ನು ಎಸಗಿರುವ ಕಾರಣ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ಕ್ರ.ಸಂ. (1)ರನ್ವಯ ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಆರೋಪಗಳನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಪಿ.ಎಂ. ಮರಳಸಿದ್ದಪ್ಪ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಬೇಕೆಂದು ಭಾವಿಸಿ ಮೇಲೆ ಓದಲಾದ ಕ್ರ.ಸಂ.(2) ದೋಷಾರೋಪಣಾ ಅನುಬಂಧ 1 ರಿಂದ 4 ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ನಂತರದಲ್ಲಿ ಕ್ರ.ಸಂ. 3 ದಿನಾಂಕ 7–10–2004ರನ್ವಯ ಶ್ರೀ ಪಿ.ಎಂ. ಮರಳಸಿದ್ದಪ್ಪ ಇವರು ನಿವೃತ್ತಿ ಹೊಂದಿದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಬೇಕೆಂದು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (4)ರನ್ವಯ ಶ್ರೀ ಪಿ.ಎಂ. ಮರಳಸಿದ್ದಪ್ಪ ಇವರು ಕಾರಣ ಕೇಳುವ ನೋಟೀಸಿಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ತಮ್ಮ ವಿರುದ್ಧ ಮಾಡಲಾಗಿದ್ದ ಆಪಾದನೆಗಳು 1999ನೇ ಇಸವಿಗೆ ಸಂಬಂಧಪಟ್ಟಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(2) (ಬಿ) ಮತ್ತು (6) (ಎ) ಪ್ರಕಾರ ಘಟನೆಯು 4 ವರ್ಷಗಳ ಹಳೆಯದಾಗಿದ್ದು, ತಮ್ಮ ವಿರುದ್ಧ ಮಾಡಲಾದ ದೋಷಾರೋಪಣೆಗಳನ್ನು ಕೈಬಿಡುವಂತೆ ಕೋರಿರುತ್ತಾರೆ.

ಸರ್ಕಾರವು ಶ್ರೀ ಪಿ.ಎಂ. ಮರಳಸಿದ್ದಪ್ಪ ಇವರು ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿ, ಜಿಲ್ಲಾಧಿಕಾರಿಗಳಿಂದ ಸದರಿ 6 ಆರೋಪಗಳಲ್ಲಿ ಸರ್ಕಾರಕ್ಕೆ ಯಾವುದಾದರೂ ಆರ್ಥಿಕ ನಷ್ಟ ಉಂಟಾಗಿದೆಯೇ? ಎಂಬುದರ ಬಗ್ಗೆ ವರದಿಯನ್ನು ಕೋರಲಾಗಿ ಮೇಲೆ ಓದಲಾದ ಕ್ರ.ಸಂ. (5)ರಲ್ಲಿ ಜಿಲ್ಲಾಧಿಕಾರಿಗಳು ಶ್ರೀ ಪಿ.ಎಂ. ಮರಳಸಿದ್ದಪ್ಪ ಇವರ ವಿರುದ್ಧ 6 ಆರೋಪಗಳಲ್ಲಿ ಯಾವುದೆ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಪಿ.ಎಂ. ಮರಳಸಿದ್ದಪ್ಪ, ಹಿಂದಿನ ತಹಶೀಲ್ದಾರ್, ಹುಣಸೂರು (ಪ್ರಸ್ತುತ ನಿವೃತ್ತರು) ಇವರ ವಿರುದ್ಧದ ಇಲಾಖಾ ವಿಚಾರಣೆ ಕೈಬಿಡುವ ಕುರಿತು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಎಡಿಇ 2000, ಬೆಂಗಳೂರು, ದಿನಾಂಕ 28ನೇ ಮೇ, 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಮರಳಸಿದ್ದಪ್ಪ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು, ಇವರು ದಿನಾಂಕ 31–5–2004ರಂದು ಸೇವೆಯಿಂದ ನಿವೃತ್ತ ಹೊಂದಿದ್ದು, ಇವರ ವಿರುದ್ಧ ಮಾಡಲಾದ ಆಪಾದನೆ ಸಂಬಂಧಿಸಿದಂತೆ ಘಟನೆಯು 1999–2000ಕ್ಕೆ ಸಂಬಂಧಪಟ್ಟಿದ್ದು, ಶ್ರೀಯುತರಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ 22–9–2004ರಂದು ಜಾರಿ ಮಾಡಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮಗಳ 214(2)(ಬಿ)(ii)ರನ್ವಯ ಇಲಾಖಾ ವಿಚಾರಣೆ ನಡೆಸಲು ಅವಕಾಶವಿಲ್ಲದಿರುವ ಕಾರಣ ಹಾಗೂ ಜಿಲ್ಲಾಧಿಕಾರಿಗಳು ಮೈಸೂರು ಇವರು ಶ್ರೀಯುತರಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಸಂಭವಿಸಿರುವುದಿಲ್ಲವೆಂದು ವರದಿ ಮಾಡಿರುವ ಹಿನ್ನೆಲೆಯಲ್ಲಿ ಶ್ರೀ ಪಿ.ಎಂ. ಮರಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್, ಇವರ ವಿರುದ್ಧ ಜರುಗಿಸಲು ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್. 1053

**ವಿಷಯ:** ಶ್ರೀ ಭೀಮಸೇನ ವೈದ್ಯ, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು–ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ: ಕಂಇ 27 ಎಡಿಇ 2000, ದಿನಾಂಕ 25–4–2001
2) ಮಾನ್ಯ ಲೋಕಾಯುಕ್ತರ, ವಿಚಾರಣಾ ವರದಿ ದಿನಾಂಕ 19–5–2003
3) ಎರಡನೇ ಕಾರಣ ಕೇಳುವ ನೋಟೀಸು ಸಂ. ಆರ್‌ಡಿ 27 ಎಡಿಇ 2000, ದಿನಾಂಕ 21–11–2003
4) ಶ್ರೀ ಭೀಮಸೇನ ವೈದ್ಯ, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ ದಿನಾಂಕ 8–12–2003ರ ಸಮಜಾಯಿಷಿ
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ. ಪಿಎಸ್‌ಸಿ/166/ಸಿಎನ್‌ಎಸ್/04, ದಿನಾಂಕ 30–1–2006

**ಪ್ರಸ್ತಾವನೆ:**

ಶ್ರೀ ಭೀಮಸೇನ ವೈದ್ಯ, ತಹಶೀಲ್ದಾರ್ (ನಿವೃತ್ತ) ಇವರು ಈ ಹಿಂದೆ ಪಾಂಡವಪುರ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ಪಾಂಡವಪುರ ಪಟ್ಟಣದ ಆಶ್ರಯ ಯೋಜನೆಯಡಿಯಲ್ಲಿ 9 ಮನೆಗಳನ್ನು ನಿರ್ಮಿಸಲು ಮಂಜೂರಾದ ಒಟ್ಟು ಮೊತ್ತವನ್ನು ಸಮರ್ಪಕವಾಗಿ ವಿನಿಯೋಗ ಮಾಡುವಲ್ಲಿ ನಿರ್ಲಕ್ಷತನ ತಾಳಿ ಸರ್ಕಾರಕ್ಕೆ ರೂ. 95,864/–ಗಳ ಆರ್ಥಿಕ ನಷ್ಟ ಉಂಟಾಗಲು ಕಾರಣರಾಗಿದ್ದು, ಈ ಲೋಪಕ್ಕಾಗಿ ಸದರಿ ತಹಶೀಲ್ದಾರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ)

ನಿಯಮಾವಳಿ ನಿಯಮ 11 ಮತ್ತು 11ಎ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, ನಿಯಮ 214(2)(ಬಿ) (i)ರ ಅನ್ವಯ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿ ನಿಯಮ 14ಎ ಪ್ರಕಾರ ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಿಕೊಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ಮಾನ್ಯ ಲೋಕಾಯುಕ್ತರು, ತಮ್ಮ ಪತ್ರ ಸಂ. ಎಲ್‌ಓಕೆ/ಎಆರ್‌ಇ–1/ವಿಚಾರಣೆ–91/2002–03, ದಿನಾಂಕ 19–5–2003 ತಮ್ಮ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ, ವರದಿಯಲ್ಲಿ ಶ್ರೀ ಭೀಮಸೇನ ವೈದ್ಯ ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಿ ಸದರಿಯವರ ವಿರುದ್ಧ ಹೂಡಲಾಗಿದ್ದ ಆರೋಪವು ಸಾಬೀತಾಗಿದೆ ಎಂದು ತಿಳಿಸಿ ಅವರ ಪಿಂಚಣಿಯಿಂದ ಶಾಶ್ವತವಾಗಿ ಶೇ. 30ರಷ್ಟನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214(1)(ಎ) ರನ್ವಯ ಕಟಾಯಿಸುವ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ. ಸರ್ಕಾರವು ಲೋಕಾಯುಕ್ತರ ಶಿಫಾರಸ್ಸುಗಳನ್ನು ಒಪ್ಪಿಕೊಂಡು ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಶ್ರೀ ಭೀಮಸೇನ ವೈದ್ಯ, ನಿವೃತ್ತ ತಹಶೀಲ್ದಾರರಿಗೆ ಲೋಕಾಯುಕ್ತದ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯೊಂದಿಗೆ ಎರಡನೇ ಕಾರಣ ಕೇಳುವ ನೋಟಿಸನ್ನು ನೀಡಿ ಅವರ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಕ್ರ.ಸಂ. (4)ರಲ್ಲಿ ಶ್ರೀ ಭೀಮಸೇನ ವೈದ್ಯ, ನಿವೃತ್ತ ತಹಶೀಲ್ದಾರರು ಎರಡನೇ ಕಾರಣ ಕೇಳುವ ನೋಟಿಸಿಗೆ ತಮ್ಮ ಸಮಜಾಯಿಷಿಯನ್ನು ನೀಡಿರುತ್ತಾರೆ. ಶ್ರೀ ಭೀಮಸೇನ ವೈದ್ಯರು ಸಮಜಾಯಿಷಿಯನ್ನು ವಿಚಾರಣಾ ವರದಿಯಲ್ಲಿನ ಅಂಶಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿ ಶ್ರೀಯುತರು ನೀಡಿರುವ ಸಮಜಾಯಿಷಿಯನ್ನು ಸರ್ಕಾರವು ಒಪ್ಪಿರುವುದಿಲ್ಲ. ಹಾಗೂ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 27 ಎಡಿಇ 2000, ದಿನಾಂಕ 29ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಶ್ರೀ ಭೀಮಸೇನ ವೈದ್ಯ, ಹಿಂದಿನ ತಹಶೀಲ್ದಾರ್, ಪಾಂಡವಪುರ (ಪ್ರಸ್ತುತ ನಿವೃತ್ತರು) ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಯುತರ ಪಿಂಚಣಿಯಿಂದ ಶಾಶ್ವತವಾಗಿ ಶೇ. 30ರಷ್ಟನ್ನು ಕಟಾಯಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಪಿ.ಆರ್. 1054 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಪಿ.ಬಿ. ಬೀಳಗಿ, ವಿಶೇಷ ತಹಶೀಲ್ದಾರ್, ಪುನರ್ ವಸತಿ ಅಧಿಕಾರಿಗಳ ಕಛೇರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಜಮಖಂಡಿ ಹಾಗೂ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಷ್ಣಾ ಮೇಲ್ದಂಡೆ ಯೋಜನೆ, ಬೀಳಗಿ ಇವರ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1) ಮಹಾ ವ್ಯವಸ್ಥಾಪಕರ ಭೂ ಸ್ವಾಧೀನ, ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರ ಪ್ರಸ್ತಾವನೆ ಸಂ: ಮ.ವ್ಯ.ಭೂ:ಸ್ವಾ:ಸಿಬ್ಬಂದಿ:ವಹಿ:131:2003–04, ದಿನಾಂಕ 29–9–2005 ಮತ್ತು 25–12–2005.

2) ಸರ್ಕಾರದ ಷೋಕಾಸ್ ನೋಟೀಸ್ ಸಂ: ಆರ್‌ಡಿ 53 ಎಡಿಇ 2005, ದಿನಾಂಕ 21–7–2006.

3) ಶ್ರೀ ಪಿ.ಬಿ. ಬೀಳಗಿ, ವಿಶೇಷ ಭೂ ಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಬೀಳಗಿ ಇವರ ರಕ್ಷಣಾ ಹೇಳಿಕೆ ದಿನಾಂಕ 25–9–2006.

**ಪ್ರಸ್ತಾವನೆ:**

ಮಹಾ ವ್ಯವಸ್ಥಾಪಕರ ಭೂ ಸ್ವಾಧೀನ, ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರ ಮೇಲೆ (1)ರಲ್ಲಿ ಓದಲಾದ ದಿನಾಂಕ 29–9–2005 ಮತ್ತು 25–12–2005ರ ಪ್ರಸ್ತಾವನೆಯಲ್ಲಿ ಶ್ರೀ ಪಿ.ಬಿ. ಬೀಳಗಿ, ವಿಶೇಷ ತಹಶೀಲ್ದಾರ್, ಪುನರ್‌ವಸತಿ ಅಧಿಕಾರಿಗಳ ಕಛೇರಿ, ಕೃಷ್ಣಾ ಮೇಲ್ದಂಡೆ ಯೋಜನೆ ಜಮಖಂಡಿ ಹಾಗೂ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣಾ ಮೇಲ್ದಂಡೆ ಯೋಜನೆ ಬೀಳಗಿ ಇವರು ಯೋಜನೆಯಡಿ ಮುಳುಗಡೆ ವ್ಯಾಪ್ತಿಗೆ ಬರುವ ಬೀಳಗಿ ತಾಲ್ಲೂಕು ಬೂದಿಹಾಳ್ ಎಸ್.ಎಚ್. ಗ್ರಾಮದ ಕಟ್ಟಡ ವಿಪಿಸಿ ಸಂ. 147:1 ಪರಿಹಾರ ಧನ ರೂ. 4,21,262/– ಮೊತ್ತದ ಚೆಕ್‌ನ್ನು ಅಸಲು ದಾವಾ ಸಂ. 256/98 ಸಿವಿಲ್ ಜಡ್ಜ್ (ಕ್ರಿ.ಶ್ರೇ) ಬೀಳಗಿ ನ್ಯಾಯಾಲಯವು ದಿನಾಂಕ 4–11–2003ರಂದು ನೀಡಿದ ತೀರ್ಪಿಗೆ ವ್ಯತಿರಿಕ್ತವಾಗಿ (1) ಶ್ರೀಮತಿ ವಿ. ಯಂಕವ್ವ ಶಿವಪ್ಪ ಮೇಟಿ (2) ಶ್ರೀ ಸದಾನಂದ (3) ಶ್ರೀ ಶಂಕರಪ್ಪ (4) ಶ್ರೀ ರೇವಪ್ಪ (5) ಶ್ರೀ ಮದಿಯಪ್ಪ ತಂದೆ ಶಿವಪ್ಪ ಮೇಟಿ ಇವರಿಗೆ ನೀಡಿದ್ದು, ಸದರಿ ಆಸ್ತಿಗೆ ಸಂಬಂಧಪಟ್ಟ ಹಾಗೂ ಹಿತಾಸಕ್ತಿಯುಳ್ಳ ಶ್ರೀ ಬಸಪ್ಪ ಕಿಡಿಯಪ್ಪ ಹಳ್ಳೂರ ಸಾ. ಬೂದಿಹಾಳ ಎಸ್.ಹೆಚ್. ಬೀಳಗಿ ತಾಲ್ಲೂಕು ಇವರು ದಿನಾಂಕ 27–1–2004ರಂದು ದೂರನ್ನು ನೀಡಿದ್ದರೂ ಸಹ ಹಾಗೂ ಶ್ರೀ ಬಸಪ್ಪ ಕಿಡಿಯಪ್ಪ ಹಳ್ಳೂರ ಹಾಗೂ ಪರಿಹಾರದ ಚೆಕ್ಕನ್ನು ಪಡೆದವರ ನಡುವೆ ವ್ಯಾಜ್ಯ ನಡೆದಿರುವುದು ಗೊತ್ತಿದ್ದರೂ ಸಹ ಪರಿಹಾರದ ಚೆಕ್ಕನ್ನು ತರಾತುರಿಯಿಂದ ದಿನಾಂಕ 29–11–2003ರ ಪ್ರಮಾಣ ಪತ್ರವನ್ನು ನೋಟರಿ ಬಾಗಲಕೋಟೆಯಿಂದ ಅಫಿಡೆವಿಟ್ ಪಡೆದು ವಿತರಿಸಿ ಭೂಸ್ವಾಧೀನ ಕಾಯ್ದೆ ಕಲಂ 30ನ್ನು ಉಲ್ಲಂಘಿಸಿರುವ ಆಪಾದನೆಗೆ ಶ್ರೀ ಪಿ.ಬಿ. ಬೀಳಗಿ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮಹಾ ವ್ಯವಸ್ಥಾಪಕರು, ಭೂ ಸ್ವಾಧೀನ, ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ 21–7–2006ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಗಳನ್ನು ಅನುಬಂಧ 1 ರಿಂದ 4 ರವರೆಗೆ ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಪಿ.ಬಿ. ಬೀಳಗಿ, ವಿಶೇಷ ತಹಶೀಲ್ದಾರ್, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ, ಬಾಗಲಕೋಟೆ ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಪಿ.ಬಿ. ಬೀಳಗಿ, ವಿಶೇಷ ತಹಶೀಲ್ದಾರ್, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ, ಬಾಗಲಕೋಟೆ ಇವರು ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಸದರಿ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿದ್ದು, ಆಪಾದನೆಯನ್ನು ಸಮರ್ಥಿಸುವಂತಹ ಅಂಶಗಳು ಹಾಗೂ ದಾಖಲಾತಿಗಳನ್ನು ಒದಗಿಸಿರುವುದಿಲ್ಲವಾದ್ದರಿಂದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಇಲಾಖೆ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 53 ಎಡಿಇ 2005, ಬೆಂಗಳೂರು, ದಿನಾಂಕ 29ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಪಿ.ಬಿ. ಬೀಳಗಿ, ವಿಶೇಷ ತಹಶೀಲ್ದಾರ್, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ, ಬಾಗಲಕೋಟೆ ಪ್ರಸ್ತುತ ವಿಶೇಷ ಭೂಸ್ವಾಧೀನಾಧಿಕಾರಿ, ಕೃ.ಮೇ. ಯೋಜನೆ, ಬೀಳಗಿ ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎಂ.ಎನ್. ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, "ಮಹೇಶ್ ನಿಲಯ", ನಾಯಕ್ ಚೌಲ, ಪಿ.ಬಿ. ರಸ್ತೆ, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ 23–8–2005ರ ಸರ್ಕಾರಿ ಆದೇಶ ಸಂ. ಸಿಆಸುಇ 16 ಸೇಇವಿ 2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000/– (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಉಡುಪಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಪಿ.ಆರ್. 1055 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ (ಪ್ರಸ್ತುತ ನಿವೃತ್ತ) ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 46 ಎಡಿಇ 2001, ದಿನಾಂಕ 29–9–2003
2) ಶ್ರೀ ಸಿ. ಲಕ್ಷ್ಮೀನರಸಿಂಹಯ್ಯ, ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ 16–8–2004
3) ಎರಡನೇ ಕಾರಣ ಕೇಳುವ ನೋಟೀಸು, ದಿನಾಂಕ 26–4–2005
4) ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್, ಇವರ ಸಮಜಾಯಿಷಿ ದಿನಾಂಕ 9–5–2005.
5) ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: ಪಿಎಸ್‌ಸಿ 162 ಸಿಎನ್‌ಎಸ್ 05, ದಿನಾಂಕ 30–1–2006.

**ಪ್ರಸ್ತಾವನೆ:**

ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು ಇವರು ಸದರಿ ತಾಲ್ಲೂಕಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಆ ತಾಲ್ಲೂಕಿನ ಹಲಗೂರು ಗ್ರಾಮದ ಸ.ನಂ. 2ರಲ್ಲಿನ ಜಮೀನು ಸರ್ಕಾರಿ ಜಮೀನಾಗಿದ್ದು, ಅದನ್ನು ಅತಿಕ್ರಮಣ ಮಾಡಿ ಕಟ್ಟಡ ಕಟ್ಟಿರುವವರ ಬಗ್ಗೆ ಕ್ರಮ ಜರುಗಿಸಲು ಅವರ ಹಿಂದಿನ ತಹಶೀಲ್ದಾರರು ಹೊರಡಿಸಿದ್ದ ನೋಟೀಸ್‌ಗಳನ್ನು ಸಕಾರಣವಿಲ್ಲದೆ ಹಿಂದಕ್ಕೆ ಪಡೆದಿರುತ್ತಾರೆಂದು, ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ಪ್ರಕರಣ ಬಂದಿದಾಗ ತಹಶೀಲ್ದಾರ್ ಮಟ್ಟದಲ್ಲಿಯೇ ಈ ಬಗ್ಗೆ ಕ್ರಮ ಜರುಗಿಸುವಂತೆ ನ್ಯಾಯಾಲಯವು ತಿಳಿಸಿದ್ದರೂ ಸಹ ಅತಿಕ್ರಮಣ ಪ್ರದೇಶವನ್ನು ಖುಲ್ಲಾಪಡಿಸಿ ಕ್ರಮ ವಹಿಸುವ ಬದಲು ಅತಿಕ್ರಮಣದಾರರಿಗೆ ಸಹಾಯ ಮಾಡಿರುತ್ತಾರೆಂದು ಹಾಗೂ ಸದರಿ ತಾಲ್ಲೂಕಿನ ಬಿ.ಜಿ. ಪುರ ಹೋಬಳಿ ಹೊಸಹಳ್ಳಿ ಗ್ರಾಮದ ಮಠಕ್ಕೆ ಸೇರಿದ ಜಮೀನನ್ನು ಯಾವ ಆದೇಶವು ಇಲ್ಲದೆ ಬೇರೆಯವರ ಹೆಸರಿಗೆ ಆರ್.ಟಿ.ಸಿ. ಬರೆದು ನಕಲು ನೀಡಿ ದುರ್ನಡತೆ ಎಸಗಿರುವ ಸದರಿ ವೃತ್ತದ ಗ್ರಾಮ ಲೆಕ್ಕಿಗರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸದೆ ಕರ್ತವ್ಯ ಲೋಪ ಎಸಗಿರುತ್ತಾರೆಂಬ ಆರೋಪದ ಮೇಲೆ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 29–9–2003ರಲ್ಲಿ ಆದೇಶಿಸಿದ್ದು, ಸದರಿ ಆದೇಶದಲ್ಲಿ ಸರ್ಕಾರವು ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಈ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ 16–8–2004ರ ಪತ್ರದೊಂದಿಗೆ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಈ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ್ದು ಸದರಿ ವಿಚಾರಣಾ ವರದಿಯಲ್ಲಿ ಶ್ರೀ ಬದರೀನಾಥ್, ಇವರ ವಿರುದ್ಧದ ಆರೋಪವು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಸರ್ಕಾರವು ಒಪ್ಪಿ ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್ ಇವರಿಗೆ ಮೇಲೆ ಓದಲಾದ ಕ್ರ.ಸಂ. (3)ರಂತೆ ಎರಡನೇ ಕಾರಣ ಕೇಳುವ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ನೀಡಿ ಶ್ರೀಯುತರ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ನೋಟೀಸಿಗೆ ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ಶ್ರೀ ಬದರೀನಾಥ್, ಇವರು ತಮ್ಮ ಲಿಖಿತ ಹೇಳಿಕೆ ನೀಡಿ ತಾವು ನೀಡಿರುವ ಕಾರಣಗಳನ್ನು ಪರಿಶೀಲಿಸಿ ತಮ್ಮನ್ನು ಈ ಇಲಾಖಾ ವಿಚಾರಣೆಯಿಂದ ಮುಕ್ತ ಮಾಡಲು ಕೋರಿರುತ್ತಾರೆ. ಸರ್ಕಾರವು ಶ್ರೀ ಬದರೀನಾಥ್‌ರವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಲಿಖಿತ ಹೇಳಿಕೆಯಲ್ಲಿ ಯಾವುದೇ ಹೊಸ ಅಂಶಗಳು ಇರದೆ ಪೂರಕ ದಾಖಲೆಗಳು ಇಲ್ಲದೇ ಇದ್ದುದರಿಂದ, ಸದರಿಯವರ ಲಿಖಿತ ಹೇಳಿಕೆಯನ್ನು ಒಪ್ಪಿರುವುದಿಲ್ಲ. ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಂಡನೆ ವಿಧಿಸಲು ನಿರ್ಣಯಿಸಿ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (5)ರ ಪತ್ರದಲ್ಲಿ ಕರ್ನಾಟಕ ಲೋಕಸವಾ ಆಯೋಗವು ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್ ಇವರ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ. 500/–ನ್ನು 5 ವರ್ಷಗಳವರೆಗೆ ಕಡಿತಗೊಳಿಸುವುದು ಸೂಕ್ತ ಎಂದು ಅಭಿಪ್ರಾಯ ನೀಡಿರುತ್ತದೆ.

ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ, ಪ್ರಸ್ತುತ ನಿವೃತ್ತ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳಿಗೆ ರೂ. 500/– ರಂತೆ ಐದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ನಿರ್ಣಯಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 46 ಎಡಿಇ 2001, ಬೆಂಗಳೂರು, ದಿನಾಂಕ 29ನೇ ಮೇ, 2007**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನಲೆಯ್ಲಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಎ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ (ಪ್ರಸ್ತುತ ನಿವೃತ್ತ) ಇವರಿಗೆ ಇವರ ವಿಶ್ರಾಂತಿ ವೇತನದಲ್ಲಿ ಪ್ರತಿ ತಿಂಗಳಿಗೆ ರೂ. 500/–ರಂತೆ 5(ಐದು) ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್. 1052

**ವಿಷಯ:** ಶ್ರೀಮತಿ ಕೆ.ಎನ್. ರಾಜಾಮಣಿ, ರಜಾ ಮೀಸಲು ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ಸ್ವಯಂ ನಿವೃತ್ತಿಯನ್ನು ಹಿಂದಕ್ಕೆ ಪಡೆಯುವ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂ. ಇಎಸ್‌ಟಿ (1) ಸಿಆರ್:204/2006–07, ದಿನಾಂಕ 7–6–2006

2) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂ. ಇಎಸ್‌ಟಿ (1) ಸಿಆರ್:204/2006–07, ದಿನಾಂಕ 4–1–2007.

ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಶ್ರೀಮತಿ ಕೆ.ಎನ್. ರಾಜಾಮಣಿ, ರಜಾ ಮೀಸಲು ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರು, ದಿನಾಂಕ 1–6–2006ರಲ್ಲಿ ತಮ್ಮ ಯಜಮಾನರಿಗೆ ಹೃದಯ ರೋಗವಿದ್ದು, ಅವರನ್ನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾಗಿದ್ದರಿಂದ ಹಾಗೂ ಗೃಹ ಕೃತ್ಯದ ಕಾರಣದಿಂದ ದಿನಾಂಕ 31–8–2006 ರಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿಯನ್ನು ಕೋರಿ ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಕಳುಹಿಸಿದ್ದರು. ಶ್ರೀಮತಿ ರಾಜಾಮಣಿಯವರ ಮನವಿಯನ್ನು ಸರ್ಕಾರವು ಪರಿಶೀಲಿಸುತ್ತಿರುವಲ್ಲಿ, ಜಿಲ್ಲಾಧಿಕಾರಿಗಳು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಶ್ರೀಮತಿ ಕೆ.ಎನ್. ರಾಜಾಮಣಿ, ಇವರು ದಿನಾಂಕ 26–12–2006ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ತಮ್ಮ ಯಜಮಾನರಿಗೆ ದಿನಾಂಕ 29–11–2006ರಂದು ನಾರಾಯಣ ಹೃದಯಾಲಯದಲ್ಲಿ ತೆರೆದ ಹೃದಯ ಚಿಕಿತ್ಸೆಯನ್ನು ನಡೆಸಲಾಗಿದ್ದು, ಅವರು ಎಂದಿನಂತೆ ಆರೋಗ್ಯವಾಗಿರುತ್ತಾರೆಂದೂ ಹಾಗೂ ತಮ್ಮ ವಯೋ ನಿವೃತ್ತಿಯು ದಿನಾಂಕ 31–5–2007ರಂದು ಇರುವ ಕಾರಣ ತಮ್ಮ ಸ್ವಯಂ ನಿವೃತ್ತಿಯ ಬದಲು ವಯೋ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿದ ಮನವಿಯನ್ನು ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಶ್ರೀಮತಿ ಕೆ.ಎನ್. ರಾಜಾಮಣಿ, ರಜಾ ಮೀಸಲು ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ಸ್ವಯಂ ನಿವೃತ್ತಿಯ ಕೋರಿಕೆಯ ಮನವಿಯನ್ನು ಹಿಂದಕ್ಕೆ ಪಡೆಯುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 165 ಎಎಸ್‌ಡಿ 2006, ಬೆಂಗಳೂರು, ದಿನಾಂಕ 22ನೇ ಮೇ, 2007**

ಶ್ರೀಮತಿ ಕೆ.ಎನ್. ರಾಜಾಮಣಿ, ರಜಾ ಮೀಸಲು ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರು ದಿನಾಂಕ 1–6–2006ರಲ್ಲಿ ಸ್ವಇಚ್ಛಾ ನಿವೃತ್ತಿ ಕೋರಿ ಸಲ್ಲಿಸಿರುವ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀಮತಿಯವರು ಸ್ವಇಚ್ಛಾ ನಿವೃತ್ತಿಯ ಮನವಿಯನ್ನು ಹಿಂಪಡೆಯಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 285(2) (x)ಅನ್ನು ಸಡಿಲಿಸಿ ಅನುಮತಿ ನೀಡಿ ದಿನಾಂಕ 31–5–2007ರಂದು ವಯೋ ನಿವೃತ್ತಿ ಹೊಂದಲು ಸಹ ಅನುಮತಿ ನೀಡಿ ಆದೇಶಿಸಿದೆ.

ಮೇಲ್ಕಂಡ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 213 ವೆಚ್ಚ–7/07, ದಿನಾಂಕ 2–4–2007ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್. 1009

**ವಿಷಯ:** ಶ್ರೀ ಕೆ.ಎಸ್. ಹೊಸಮನಿ, ತಹಶೀಲ್ದಾರ್, ಗಂಗಾವರಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ: ಡಿಸಿ/ಇಎಸ್‌ಟಿ–1/ಸಿಆರ್–25/2007–08, ದಿನಾಂಕ 26–5–2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 26–5–2007ರ ಜಿಲ್ಲಾಧಿಕಾರಿಗಳು ಕೊಪ್ಪಳ, ಇವರ ಪತ್ರದಲ್ಲಿ ತಹಶೀಲ್ದಾರ್ ಗಂಗಾವತಿ ಇವರು ಗಂಗಾವತಿ ನಗರದಲ್ಲಿ ಇದ್ದ ಅಯ್ಯಪ್ಪ ದೇವಸ್ಥಾನ ತಾತ್ಕಾಲಿಕ ಕಟ್ಟಡವನ್ನು ದಿನಾಂಕ 19–3–2007ರಂದು ಅಂದರೆ ಯುಗಾದಿ ದಿನ ಪೊಲೀಸ್ ಸಹಕಾರದೊಂದಿಗೆ ಒಡೆದು ಹಾಕಿದ್ದ ವಿಷಯ ಗಂಗಾವತಿ ನಾಗರೀಕರಲ್ಲಿ ಹರಡಿದ ಕೂಡಲೇ ವಿವಿಧ ರಾಜಕೀಯ ಪಕ್ಷಗಳು ಬಂದ್‌ಗೆ ಕರೆಕೊಟ್ಟಿದ್ದು, ಬಂದ್ ಯಶಸ್ವಿಯಾಗಿ ಸಣ್ಣ ಪುಟ್ಟ ಘಟನೆಗಳೊಂದಿಗೆ ಮುಕ್ತಾಯವಾಗಿದೆ. ಆದರೆ ಗಂಗಾವತಿ ನಾಗರೀಕರಲ್ಲಿ ಇನ್ನು ಆತಂಕ ಇದ್ದು ಒಟ್ಟಾರೆಯಾಗಿ ಗಂಗಾವತಿ ನಗರದಲ್ಲಿ ಪ್ರಕ್ಷುಬ್ಧ ಸ್ಥಿತಿ ಇದೆಯೆಂದು ತಮ್ಮ ವರದಿಯಲ್ಲಿ ತಿಳಿಸಿದ್ದು, ತಹಶೀಲ್ದಾರ್ ಗಂಗಾವತಿ ಇವರು ಜಿಲ್ಲಾಧಿಕಾರಿಗಳ ಗಮನಕ್ಕೆ ತರದೆ ದೇವಸ್ಥಾನ ಅಧಿಕಾರಸ್ಥರಿಗೆ ಕೆಲವೊಂದು ಭರವಸೆಗಳನ್ನು ನೀಡಿರುತ್ತಾರೆ. ಇದರಿಂದ ಗಂಗಾವತಿ ನಗರದಲ್ಲಿ ಕಾನೂನು ಸುವ್ಯವಸ್ಥೆ ಸಮಸ್ಯೆ ಉಂಟಾಗಿರುತ್ತದೆ. ಆದ ಕಾರಣ ಶ್ರೀ ಕೆ.ಎಸ್. ಹೊಸಮನಿ ತಹಶೀಲ್ದಾರ್, ಗಂಗಾವತಿ ತಾಲ್ಲೂಕು ಇವರನ್ನು ಸೇವೆಯಿಂದ ಅಮಾನತ್ತು ಮಾಡಲು ಶಿಫಾರಸ್ಸು ಮಾಡಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ತಹಶೀಲ್ದಾರರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತು ಮಾಡಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 21 ಎಡಿಇ 2007, ಬೆಂಗಳೂರು, ದಿನಾಂಕ 4ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1975ರ ನಿಯಮ 10(i) (ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎಸ್. ಹೊಸಮನಿ, ತಹಶೀಲ್ದಾರ್ ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಅವರ ವಿರುದ್ಧ ಇಲಾಖಾ

ವಿಚಾರಣೆ ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1061

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್, ಹಾನಗಲ್ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಸಿದ್ದಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಹಾಗೂ ಶ್ರೀ ಎಸ್.ವಿ. ಕರಲಿಂಗಣ್ಣನವರ್, ಹಿಂದಿನ ಶಿರಸ್ತೇದಾರ್, ಹಾನಗಲ್ ತಾಲ್ಲೂಕು, ಪ್ರಸ್ತುತ ಉಪ ತಹಶೀಲ್ದಾರ್, ನಾಡಕಚೇರಿ, ಬೊಮ್ಮನಹಳ್ಳಿ, ಹಾವೇರಿ ತಾಲ್ಲೂಕು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರ ಪತ್ರ ಸಂಖ್ಯೆ. ಭೂಸುವಿ:35/2005–06, ದಿನಾಂಕ 20–2–2006

2) ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರ ಪತ್ರ ಸಂಖ್ಯೆ. ಸಿಬ್ಬಂದಿ (2) ವಹಿ:105/2005–06, ದಿನಾಂಕ 4–3–2006, 28–10–2006.

3) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 54 ಎಡಿಇ 2006, ದಿನಾಂಕ 13–12–2006

4) ಶ್ರೀ ಸಿ. ಪ್ರಕಾಶನ್ ಇವರ ಲಿಖಿತ ಸಮಜಾಯಿಷಿ ದಿನಾಂಕ 11–1–2007

5) ಶ್ರೀ ಎಸ್.ವಿ. ಕರಲಿಂಗಣ್ಣನವರ್ ಇವರ ಲಿಖಿತ ಸಮಜಾಯಿಷಿ ದಿನಾಂಕ 22–1–2007.

**ಪ್ರಸ್ತಾವನೆ:**

ಹಾನಗಲ್ ತಾಲ್ಲೂಕಿನ 162 ದೇವಸ್ಥಾನಗಳ ತಸ್ತೀಕ್ ಹಣ ಒಟ್ಟು ರೂ. 2,59,049/– (ಎರಡು ಲಕ್ಷದ ಐವತ್ತೊಂಬತ್ತು ಸಾವಿರದ ನಲವತ್ತೊಂಬತ್ತು ರೂಪಾಯಿಗಳು ಮಾತ್ರ) ಗಳ ಬಿಲ್ಲನ್ನು ಹಿರಿಯ ಉಪವಿಭಾಗಾಧಿಕಾರಿಗಳು, ಸವಣೂರು ಇವರು ದಿನಾಂಕ 24–3–2005ರಂದು ಮೇಲು ರುಜು ಮಾಡಿ ಕಳುಹಿಸಿದ್ದು, ಈ ಹಣವನ್ನು ಖಜಾನೆಯಿಂದ ನಗದೀಕರಿಸಿದ ಮೇಲೆ ಸಂಬಂಧಿಸಿದವರಿಗೆ ಚೆಕ್ ಮುಖಾಂತರ ಪಾವತಿ ಮಾಡಬೇಕಾಗಿರುತ್ತದೆ. ಆದರೆ, ತಾಲ್ಲೂಕು ಕಛೇರಿಯಲ್ಲಿ ನಗದೀಕರಿಸಿದ ಹಣವನ್ನು ನೇರವಾಗಿ ದೇವಸ್ಥಾನಗಳ ವಹಿವಾಟುದಾರರಿಗೆ ನಗದು ಬಟವಾಡೆ ಮಾಡಿ ಉಳಿದ ಶಿಲ್ಕು ರೂ. 17,521/– (ಹದಿನೇಳು ಸಾವಿರದ ಐದು ನೂರ ಇಪ್ಪತ್ತೊಂದು ರೂಗಳು ಮಾತ್ರ) ಅನ್ನು ದಿನಾಂಕ 5–12–2005ರಂದು ಬ್ಯಾಂಕಿಗೆ ಜಮಾ ಮಾಡಿರುವುದು ಕಂಡು ಬರುತ್ತದೆ. ಇದನ್ನು ಪರಿಶೀಲಿಸಲಾಗಿ ಸಂಬಂಧಿಸಿದ ದೇವಸ್ಥಾನಗಳ ಅರ್ಚಕರಿಗೆ ತಸ್ತೀಕ್ ಹಣ ಬಟವಾಡೆ ಆಗಿರುವುದಿಲ್ಲವೆಂದು ಹಣ ಬಟವಾಡೆಯಾದ ವ್ಯಕ್ತಿಗಳ ಹೆಸರಿನವರು ಗ್ರಾಮದಲ್ಲಿ ಯಾರು ಇರುವುದಿಲ್ಲವೆಂದು ಖೊಟ್ಟಿ ಸಹಿ ಮಾಡಿ ತಸ್ತೀಕ್ ಹಣ ಬಟವಾಡೆ ಮಾಡಿರುವುದು ಕಂಡು ಬಂದಿದೆ ಎಂಬ ಅಂಶ ಮೇಲ್ನೋಟಕ್ಕೆ ಸಾಬೀತಾಗಿದ್ದು, ಹಣ ದುರುಪಯೋಗವಾಗಿದ್ದು ಕಂಡು ಬಂದಿದೆಯೆಂದು ಹಿರಿಯ ಉಪ ವಿಭಾಗಾಧಿಕಾರಿಗಳು, ಸವಣೂರು ಇವರು ವರದಿ ಮಾಡಿರುವುದನ್ನು ಉಲ್ಲೇಖಿಸಿ ಈ ಅವಧಿಯಲ್ಲಿ ಹಾನಗಲ್ ತಹಶೀಲ್ದಾರ್ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿ / ನೌಕರರುಗಳು ಈ ವಿಷಯವನ್ನು ನಿರ್ವಹಿಸಿರುವುದು ಕಂಡು ಬಂದಿರುತ್ತದೆಂದು ಸದರಿ ಸಿಬ್ಬಂದಿಗಳ ಮೇಲೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ 20–2–2006ರ ಪತ್ರದಲ್ಲಿ ಹಾವೇರಿ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

1) ಶ್ರೀ ಸಿ. ಪ್ರಕಾಶನ್, ತಹಶೀಲ್ದಾರ್,

2) ಶ್ರೀ ಎಸ್.ವಿ. ಕರಲಿಂಗಣ್ಣನವರ, ಶಿರಸ್ತೇದಾರ್

3) ಶ್ರೀ ಪಿ.ಕೆ. ರಿತ್ತಿಮಠ, ದ್ವಿ.ದ.ಸ.

ಜಿಲ್ಲಾಧಿಕಾರಿಗಳ ವರದಿ ಆಧರಿಸಿ ಮೇಲ್ಕಾಣಿಸಿದ ಅಧಿಕಾರಿ / ನೌಕರರುಗಳನ್ನು ಸಮಸಂಖ್ಯೆಯ ದಿನಾಂಕ 17–8–2006ರಲ್ಲಿ ಇಲಾಖಾ ವಿಚಾರಣೆ ಬಾಕಿಯಿರಿಸಿ ಸೇವೆಯಿಂದ ಅಮಾನತ್ತು ಮಾಡಲಾಯಿತು. ಆದರೆ, ಶ್ರೀ ಪಿ.ಕೆ. ರಿತ್ತಿಮಠ, ದ್ವಿ.ದ.ಸ. ಇವರು ದಿನಾಂಕ 20–8–2006ರಂದು ಮರಣ ಹೊಂದಿದ್ದರಿಂದ, ಉಳಿದ ಅಧಿಕಾರಿ/ ನೌಕರರಾದ ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್, ಹಾನಗಲ್ ಮತ್ತು ಶ್ರೀ ಎಸ್.ವಿ. ಕರಲಿಂಗಣ್ಣನವರ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹಾನಗಲ್ ಇವರ ವಿರುದ್ಧ ಕ್ರ.ಸಂ. (2)ರಲ್ಲಿರುವ ಪತ್ರಗಳಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ–1 ರಿಂದ 4ರವರೆಗೆ ತಯಾರಿಸಿ ಹಾವೇರಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಸದರಿ ಆರೋಪ ಪಟ್ಟಿಗಳನ್ನು ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ 13–12–2006ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ದೋಷಾ ರೋಪಣೆಗಳನ್ನು ಅನುಬಂಧ 1 ರಿಂದ 4ರವರೆಗೆ ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಸಿ. ಪ್ರಕಾಶನ್, ತಹಶೀಲ್ದಾರ್ ಮತ್ತು ಶ್ರೀ ಎಸ್.ವಿ. ಕರಲಿಂಗಣ್ಣನವರ್, ಶಿರಸ್ತೇದಾರ್, ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (4) ಮತ್ತು (5)ರಲ್ಲಿ ಶ್ರೀ ಸಿ. ಪ್ರಕಾಶನ್, ತಹಶೀಲ್ದಾರ್ ಮತ್ತು ಶ್ರೀ ಎಸ್.ವಿ. ಕರಲಿಂಗಣ್ಣ ನವರ್, ಶಿರಸ್ತೇದಾರ್, ಇವರುಗಳು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ. ಹಾಗೂ ಅವುಗಳನ್ನು ಒಪ್ಪಿಕೊಂಡಿರುವುದಿಲ್ಲ. ಸದರಿ ರಕ್ಷಣಾ ಹೇಳಿಕೆಗಳನ್ನು ಪರಿಶೀಲಿಸಲಾಗಿದ್ದು, ಆಪಾದನೆಗಳನ್ನು ಸಮರ್ಥಿಸುವಂತಹ ಅಂಶಗಳು ಹಾಗೂ ದಾಖಲಾತಿಗಳನ್ನು ಒದಗಿಸಿರುವುದಿಲ್ಲವಾದ್ದರಿಂದ ಸರ್ಕಾರವು ಈ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖೆ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 54 ಎಡಿಇ 2006, ಬೆಂಗಳೂರು, ದಿನಾಂಕ 16ನೇ ಜೂನ್, 2007**

ಪ್ರಸ್ತಾವನೆಯನ್ನು ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್ ಮತ್ತು ಶ್ರೀ ಎಸ್.ವಿ. ಕರಲಿಂಗಣ್ಣನವರ್, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹಾನಗಲ್, ಇವರುಗಳ ಮೇಲೆ ಇರುವ ಆಪಾದನೆಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು, ಸರ್ಕಾರವು ಶ್ರೀ ಬಿ.ಕೆ. ಕಣವಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1806, 8ನೇ ಮೇನ್, ಜ್ಯೂಡಿಷಿಯಲ್ ಆಫೀಸರ್ಸ್ ಲೇಔಟ್, ಜಿ.ಕೆ.ವಿ.ಕೆ. ಅಂಚೆ, ಬೆಂಗಳೂರು 560 064 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದ ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ 23–8–2005ರ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಹಾವೇರಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1119

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಬಿ.ಟಿ. ಕೃಷ್ಣೇಗೌಡ, ಹಿಂದನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು (ಪ್ರಸ್ತುತ ನಿವೃತ್ತರು) ಹಾಗೂ ಕಾರ್ಯದರ್ಶಿ, ಗ್ರಾಮ ಪಂಚಾಯಿತಿ, ಪಾಲಗ್ರಹಾರ, ನಾಗಮಂಗಲ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ 23–2–2007ರ ಮಂಡ್ಯ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಸ್‌ಟಿ(2)34/2006–07.

**ಪ್ರಸ್ತಾವನೆ:**

ಶ್ರೀ ಬಿ.ಟಿ. ಕೃಷ್ಣೆಗೌಡ, ನಿವೃತ್ತ ತಹಶೀಲ್ದಾರ್, ಇವರು ಹಿಂದೆ ನಾಗಮಂಗಲ ತಾಲ್ಲೂಕಿನ ತಹಶೀಲ್ದಾರರಾಗಿದ್ದಾಗ, ನಾಗಮಂಗಲ ತಾಲ್ಲೂಕು, ಪಾಲಗ್ರಹಾರದ ಗ್ರಾಮ ಪಂಚಾಯಿತ ವ್ಯಾಪ್ತಿಗೆ ಬರುವ ಕೋಟೆ ಬೆಟ್ಟ ಗ್ರಾಮದ ಸರ್ಕಾರಿ ಪ್ರಾಥಮಿಕ ಪಾಠಶಾಲೆಯ ಅಡುಗೆಯವರ ಹುದ್ದೆಯು ಪರಿಶಿಷ್ಟ ಜಾತಿ / ಪರಿಶಿಷ್ಟ ಜನಾಂಗದವರಿಗೆ ಮೀಸಲಾಗಿದ್ದರೂ ಸಹ ಆ ಹುದ್ದೆಯನ್ನು ಮೀಸಲಾತಿಯಲ್ಲದವರು ಸಲ್ಲಿಸಿದ ಅರ್ಜಿಯನ್ನು ಆಯ್ಕೆ ಮಾಡಿ, ಮೀಸಲಾತಿ ಇಲ್ಲದವರನ್ನು ನೇಮಕಾತಿ ಮಾಡಿ ಕರ್ತವ್ಯ ಲೋಪ ಎಸಗಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 03 ಎಡಿಇ 2006, ಬೆಂಗಳೂರು, ದಿನಾಂಕ 12ನೇ ಜೂನ್, 2007**

ಪ್ರಸ್ತಾವನೆಯನ್ನು ಪರಿಶೀಲಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಟಿ. ಕೃಷ್ಣೆಗೌಡ, ನಿವೃತ್ತ ತಹಶೀಲ್ದಾರ್, ಇವರು ಹಿಂದೆ ನಾಗಮಂಗಲ ತಾಲ್ಲೂಕಿನ ತಹಶೀಲ್ದಾರ್ ಆಗಿದ್ದಾಗ ಇವರ ಕರ್ತವ್ಯ ಲೋಪಕ್ಕಾಗಿ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಮಂಜೂರಾತಿ ನೀಡಿದೆ. ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರಡಿಯಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1118 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಮೆ. ಶಿವಶಕ್ತಿ ಶುಗರ್ಸ್ (ಲಿ). ಸವದತ್ತಿ, ರಾಯಭಾಗ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 3000 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ 11–9–2007.

2) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/57/2007–08, ದಿನಾಂಕ 13–11–07.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ. ಶಿವಶಕ್ತಿ ಶುಗರ್ಸ್ (ಲಿ), ಸವದತ್ತಿ, ರಾಯಭಾಗ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 3000 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 361 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ, 2008**

ಮೆ. ಶಿವಶಕ್ತಿ ಶುಗರ್ಸ (ಲಿ) ಸವದತ್ತಿ, ರಾಯಭಾಗ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 3000 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ, ನೀಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 241 ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೆ. ಮೃಡಗಿರಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಗಂಗಾಪುರ, ಮುಂಡಗರಿ ತಾಲ್ಲೂಕು, ಗದಗ್ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ 11–9–2007

2) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/45/1995–96, ದಿನಾಂಕ 17–9–2007.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರದಲ್ಲಿ ಮೆ. ಮೃಡಗಿರಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಗಂಗಾಪುರ, ಮುಂಡರಗಿ ತಾಲ್ಲೂಕು, ಗದಗ್ ಜಿಲ್ಲೆ, ಈ ಕಾರ್ಖಾನೆಯನ್ನು ಮೆ. ವಿಜಯನಗರ ಶುಗರ್ಸ್ ಪ್ರೈ (ಲಿ) ರವರಿಗೆ ಗುತ್ತಿಗೆಗೆ ನೀಡಲಾಗಿದ್ದು ಈ ಕಾರ್ಖಾನೆಯು ನಿರ್ಮಾಣದ ಪ್ರಗತಿಯಲ್ಲಿದ್ದು, ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ ಹಾಗೂ ಈ

ಕಾರ್ಖಾನೆಗೆ ಯಾವುದೇ ಕಾರ್ಖಾನೆಗೆ ಹಂಚಿಕೆಯಾಗದ ಗದಗ, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳ 145 ಹಳ್ಳಿಗಳನ್ನು ಹೆಚ್ಚುವರಿಯಾಗಿ ಹಂಚಿಕೆ ಮಾಡಲು ಸಹ ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 324 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ, 2008**

ಮೆ. ಮೃಡಗಿರಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಗಂಗಾಪುರ, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರಿದು, ಈ ಕಾರ್ಖಾನೆಗೆ ಹೆಚ್ಚುವರಿ ಕಬ್ಬಿನ ಮೀಸಲು ಪ್ರದೇಶಗಳ ಹಂಚಿಕೆಗೆ ಸಂಬಂಧಿಸಿದಂತೆ, ಅಧಿಸೂಚನೆಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 242

**ವಿಷಯ:** ಶ್ರೀ ರೇಣುಕಾ ಶುಗರ್ಸ್ (ಲಿ), ಬುರ್ಲಟ್ಟಿ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಯಿಂದ 15000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತಿರಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ 11–9–2007

2) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/65/2006–07, ದಿನಾಂಕ 21–11–2007.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ರೇಣುಕಾ ಶುಗರ್ಸ್ (ಲಿ), ಬುರ್ಲಟ್ಟಿ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 5000 ಟಿಸಿಡಿ ಯಿಂದ 15000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 385 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ, 2008**

ಶ್ರೀ ರೇಣುಕಾ ಶುಗರ್ಸ್ (ಲಿ), ಬುರ್ಲಟ್ಟಿ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಯಿಂದ 15000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ, ನೀಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 243

**ವಿಷಯ:** ಶ್ರೀ ರೇಣುಕಾ ಶುಗರ್ಸ್ (ಲಿ), ಮನೋಳಿ, ಸೌಂದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತಿರಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ 11–9–2007

2) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/29/2006–07, ದಿನಾಂಕ 21–11–2007.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ರೇಣುಕಾ ಶುಗರ್ಸ್ (ಲಿ), ಮನೋಳಿ, ಸೌಂದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 25000

ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 123 ಎಸ್‌ಜಿಎಫ್ 2005, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ, 2008**

ಶ್ರೀ ರೇಣುಕಾ ಶುಗರ್ಸ್ (ಲಿ), ಮನೋಳಿ, ಸೌಂದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ, ನೀಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 244

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸಲು ಜಿಲ್ಲಾಧಿಕಾರಿಗಳಿಗೆ ವಾಹನ ಒದಗಿಸುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಸಿಎಎಲ್.ಸಿಆರ್:44/07–08, ದಿನಾಂಕ 31–1–2008.

**ಪ್ರಸ್ತಾವನೆ:**

ಪ್ರಕೃತಿ ವಿಕೋಪದಂತಹ ಸಂದರ್ಭದಲ್ಲಿ ತುರ್ತು ರಕ್ಷಣಾ ಕಾರ್ಯ ಕೈಗೊಳ್ಳಲು ವಾಹನವನ್ನು ಒದಗಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ ಬೇಡಿಕೆ ಇರುತ್ತದೆ.

ರಾಜ್ಯದಲ್ಲಿ ಸಂಭವಿಸುತ್ತಿರುವ ಪ್ರವಾಹ ಪರಿಸ್ಥಿತಿ ಸಂದರ್ಭದಲ್ಲಿ ತುರ್ತು ರಕ್ಷಣಾ ಕಾರ್ಯಕೈಗೊಳ್ಳಲು ವಾಹನದ ಅವಶ್ಯಕತೆ ಇರುವುದನ್ನು ಸರ್ಕಾರವು ಪರಿಗಣಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಖರೀದಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 2006, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ರಕ್ಷಣಾ ಕಾರ್ಯಕ್ಕಾಗಿ ಜಿಲ್ಲಾಧಿಕಾರಿಗಳ ಬಳಿಯಲ್ಲಿ ಲಭ್ಯವಿರುವ ಸಿ.ಆರ್.ಎಫ್. ನಿಧಿಯಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನಿಯಮಾನುಸಾರ ಖರೀದಿಸಲು ಅನುಮೋದನೆ ನೀಡಿದೆ.

1) ಈ ವಾಹನವು all terrain all weather ನಲ್ಲಿ ಬಳಸುವಂತಿರಬೇಕು

2) ಈ ವಾಹನದಲ್ಲಿ ಕನಿಷ್ಟ 4–5 ಜನರಿಗೆ ಸ್ಥಳಾವಕಾಶವಿರಬೇಕು

3) ಈ ವಾಹನವು ತುರ್ತು ಸಂದರ್ಭದಲ್ಲಿ search and rescue equipment ಗಳನ್ನು ಅಳವಡಿಸಿಕೊಂಡು ಸಾಗಿಸುವಂತಿರಬೇಕು

4) ವಾಹನದ ದುರಸ್ತಿ ವೆಚ್ಚ, ನಿರ್ವಹಣೆ, ಇಂಧನ ವೆಚ್ಚ, ಚಾಲಕರ ವೇತನ ಹಾಗೂ ಇತರೆ ಖರ್ಚು ವೆಚ್ಚಗಳನ್ನು ಜಿಲ್ಲಾಧಿಕಾರಿಗಳು ಅವರ ವಾರ್ಷಿಕ ಆಯವ್ಯಯ ಅನುದಾನದಲ್ಲಿಯೇ ಭರಿಸತಕ್ಕದ್ದು. ಸಿಆರ್‌ಎಫ್ ನಿಧಿಯಿಂದ ಭರಿಸುವಂತಿಲ್ಲ.

5) ಈ ವಾಹನವು ಯಾವುದೇ ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸುವಂತಿರಬೇಕು.

6) ವಾಹನ ಖರೀದಿಯ ಎಲ್ಲಾ ಪ್ರಕ್ರಿಯೆಯನ್ನು ಈ ಆರ್ಥಿಕ ವರ್ಷದಲ್ಲಿಯೇ ಮುಗಿಸುವುದು

ಈ ಅನುದಾನವನ್ನು ವೆಚ್ಚ ಮಾಡುವಾಗ ಕಾಲಕಾಲಕ್ಕೆ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆ ಹಾಗೂ ಖರೀದಿ ನಿಯಮಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 249

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರುರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಂ–18/ಸೊಆರ್–5/07, ಮಂಗಳೂರು, ದಿನಾಂಕ 12–12–2007.

2) ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/121/2007–08, ದಿನಾಂಕ 24–12–2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರುರವರು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ಇವರು ಶ್ರೀ ಗಣೇಶ್‌ರಾವ್ ಬಿನ್ ಉಮಾನಾಥ ರಾವ್, ಮಾಲೀಕರು ಮೆಟಲ್ ಕ್ರಾಫ್ಟ್, ಇಂಡಸ್ಟ್ರಿಯಲ್ ಎಸ್ಟೇಟ್, ಯಯ್ಯಾಡಿ, ಮಂಗಳೂರು ಇವರು ಯಯ್ಯಾಡಿಯಲ್ಲಿ ಕೈಗಾರಿಕಾ ಶೆಡ್ ಹೊಂದಿದ್ದು, ಸದರಿ ಕೈಗಾರಿಕೆಗೆ ಸರ್ಕಾರದಿಂದ ಸಹಾಯಧನವಾಗಿ ರೂ. 48,000/– ಮಂಜೂರಾಗಿದ್ದು, ಸದರಿ ಹಣವನ್ನು ನೀಡಲು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ರೂ. 2000/– ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿದ್ದರಿಂದ ಫಿರ್ಯಾದಿಗೆ ಲಂಚ ಕೊಡಲು ಇಷ್ಟವಿಲ್ಲದ ಕಾರಣ ಸದರಿ ಅಧಿಕಾರಿಯ ಮೇಲೆ ಸೂಕ್ತ ಕಾನೂನು ಕ್ರಮ ಜರುಗಿಸಲು ಕೋರಿರುತ್ತಾರೆ.

ಸದರಿ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆ, ಮಂಗಳೂರು, ಇವರು ಸದರಿ ಆರೋಪಿತ ಸರ್ಕಾರಿ ನೌಕರನ ಮೇಲೆ ಭ್ರಷ್ಟಾಚಾರದ ನಿರೋದ ಕಾಯ್ದೆ 1988ರ ಕಲಂ 7ರ 13(1)(ಡಿ) ಜೊತೆಗೆ 13(2)ರ ಪ್ರಕಾರ ಲೋಕಾಯುಕ್ತ ಠಾಣೆ ಮೊಕದ್ದಮೆ ನಂ. 5/2007ರ ಪ್ರಕಾರ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿದ್ದಾರೆ.

ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಇವರು ದಿನಾಂಕ 10–12–2007ರಂದು ಫಿರ್ಯಾದಿ ಇವರಿಂದ ರೂ.1000/– ಗಳ ಅಕ್ರಮ ಸಂಭಾವನೆಗೆ ಒತ್ತಾಯಿಸಿ ಸ್ವೀಕರಿಸುವಾಗ ಲೋಕಾಯುಕ್ತರ ದಾಳಿಗೆ ಸಿಕ್ಕಿಕೊಂಡಿರುತ್ತಾರೆ. ಆದುದರಿಂದ, ದಸ್ತಗಿರಿಯಾದ ದಿನಾಂಕ 10–12–2007ರಿಂದಲೇ ಸದರಿ ಅಧಿಕಾರಿಯವರನ್ನು ಅಮಾನತ್ತಿನಲ್ಲಿಡುವಂತೆ ಪರಿಗಣಿಸಬಹುದಾಗಿರುತ್ತದೆ ಎಂಬುವುದಾಗಿ ಲೋಕಾಯುಕ್ತ ಪತ್ರದಲ್ಲಿ ತಿಳಿಸಿದ್ದಾರೆ.

ಆಪಾದಿತ ಅಧಿಕಾರಿ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಮತ್ತು ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 1957ರ ನಿಯಮ 10ರನ್ವಯ ಸದರಿಯವರನ್ನು ದಸ್ತಗಿರಿಯಾದ ದಿನಾಂಕ 10–12–2007ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡುವಂತೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು ಇವರ ವಿರುದ್ಧ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಮಂಗಳೂರು ಇವರು ಲಂಚ ನಿರೋಧಕ ಕಾಯ್ದೆ 1988 ಕಲಂ 7, 13(1) ಡಿ ಜೊತೆಗೆ 13(2)ರ ಪ್ರಕಾರ ಮಂಗಳೂರು ಲೋಕಾಯುಕ್ತ ಠಾಣೆ ಮೊ.ನಂ. 5/2007ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿದ್ದು, ಸದರಿ ಪ್ರಕರಣದಲ್ಲಿ ಸದರಿಯವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿಯವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಕೂಡಲೇ ಇವರ ಲೀನ್‌ನನ್ನು ಬೇರೆ ಕಡೆಗೆ ವರ್ಗಾಯಿಸಲು ಹಾಗೂ ಇವರು ಗ್ರೂಪ್ 'ಎ' ಅಧಿಕಾರಿ ವೃಂದದವರಾಗಿರುವುದರಿಂದ ಸರ್ಕಾರದ ಮಟ್ಟದಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 05 ಕೈಸೇವಿ 2008, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ಇವರು ಫಿರ್ಯಾದುದಾರರಿಂದ ಲಂಚದ ಹಣವನ್ನು ಸ್ವೀಕರಿಸಿರುವುದು ಸಾಬೀತಾಗಿರುವುದರಿಂದ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ / ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ. ಹಾಗೂ ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ಸರ್ಕಾರದ ಪೂರ್ವಾನುಮತಿಯಿಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ನಿಯಮಾವಳಿ ರೀತ್ಯಾ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್**

ಪಿ.ಆರ್. 252

ಸರ್ಕಾರದ ಅಧೀನ ಕಾರ್ಯದರ್ಶಿ,,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

(ಸೇವೆಗಳು).